

ನಿಮ್ಮಭಾಗ್ಯ ದೊಡ್ಡದೋ ನಮ್ಮಭಾಗ್ಯ ದೊಡ್ಡದೋ
ಸಮ್ಮತಿಂದ ನಾವು ನೀವು ಸಾಟಿ ಮಾಡಿ ನೋಡುವ ಬನ್ನಿ

ಹೇಮ ಹೊನ್ನು ಹಣಗಳಿಗೆ ಹೇರಳ ಭಯಗಳುಂಟು
ರಾಮನಾಮದ್ರವ್ಯಕಿನ್ನು ಯಾರ ಭಯವಿಲ್ಲವಯ್ಯ

ಕಡಗ ಕಂಠಮಾಲೆಗಳಿಗೆ ಕಳ್ಳರ ಅಂಜಿಕೆಯುಂಟು
ಅಡವಿ ತುಳಸಿ ಮಾಲೆಗಿನ್ನು ಆರ ಅಂಜಿಕಿಲ್ಲವಯ್ಯ

ವ್ಯಾಪಾರ ಉದ್ಯೋಗಕಿನ್ನು ವ್ಯಾಕುಲದ ಭಯವುಂಟು
ಗೋಪಾಳದ ವೃತ್ತಿಗಿನ್ನು ಗೊಡವೆ ಯಾರದಿಲ್ಲವಯ್ಯ

ಸರಕು ಬೆಲ್ಲ ತುಪ್ಪ ಧಾನ್ಯ ಸವೆದೀತೆಂಬ ಚಿಂತೆಯುಂಟು
ಹರಿನಾಮಾಮೃತಕೆ ಇನ್ನು ಯಾವ ಚಿಂತೆಯಿಲ್ಲವಯ್ಯ

ನಿಮ್ಮಭಾಗ್ಯ ಲಕ್ಷ್ಮಿದೇವಿ ನಮ್ಮಭಾಗ್ಯ ನಾರಾಯಣನು
ನಮ್ಮನಿಮ್ಮಭಾಗ್ಯದೊಡೆಯ ಪುರಂದರವಿಠಲನು

ಶ್ರೀ ಪುರಂದರದಾಸರು

ಸಂದರ್ಶಿಸಿ. ಆನಂದಿಸಿ.

# ಶ್ರೀ ವೆಂಕಟೇಶ್ವರಸ್ವಾಮಿ ಆಲಯ - ಹೃಷೀಕೇಶ
# ಶ್ರೀ ಕಲ್ಯಾಣ ವೆಂಕಟೇಶ್ವರ ಸ್ವಾಮಿ ಆಲಯ - ನಾರಾಯಣವನಂ
# ಶ್ರೀ ವೆಂಕಟೇಶ್ವರಸ್ವಾಮಿ ಆಲಯ - ಅಪ್ಪಲಾಯಗುಂಟ

## ವಾರ್ಷಿಕ ಬ್ರಹ್ಮೋತ್ಸವಗಳು

28--5--96 ರಿಂದ 6--6--96 ವರೆಗೆ

### ಕಾರ್ಯಕ್ರಮ ವಿವರ

| ದಿನಾಂಕ | ವಾರ | ಹಗಲು | ರಾತ್ರಿ |
|---|---|---|---|
| 28--5--96 | ಮಂಗಳವಾರ | | ಸೇನಾಪತಿ ಉತ್ಸವ. |
| 29--5--96 | ಬುಧವಾರ | ಧ್ವಜಾರೋಹಣ | ದೊಡ್ಡ ಶೇಷವಾಹನ. |
| 30--5--96 | ಗುರುವಾರ | ಚಿಕ್ಕಶೇಷವಾಹನ | ಹಂಸವಾಹನ. |
| 31--5--96 | ಶುಕ್ರವಾರ | ಸಿಂಹವಾಹನ | ಮುತ್ತಿನ ಪಲ್ಲಕ್ಕಿವಾಹನ. |
| 1--6--96 | ಶನಿವಾರ | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ. |
| 2--6--96 | ಭಾನುವಾರ | ಮೋಹಿನೀ ಅವತಾರ | ಗರುಡವಾಹನ |
| 3--6--96 | ಸೋಮವಾರ | ಹನುಮದ್ವಾಹನ- ಸಂಜೆ -- ವಸಂತೋತ್ಸವ | ಗಜವಾಹನ |
| 4--6--96 | ಮಂಗಳವಾರ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ. |
| 5--6--96 | ಬುಧವಾರ | ರಥೋತ್ಸವ | ಅಶ್ವವಾಹನ. |
| 6--6--96 | ಗುರುವಾರ | ಪಲ್ಲಕ್ಕಿ ಉತ್ಸವ ಚಕ್ರಸ್ನಾನ | ಧ್ವಜಾವರೋಹಣ. |

ಸೂಚನೆ :ಬ್ರಹ್ಮೋತ್ಸವದ ದಿನಗಳಲ್ಲಿ ದಿನವೂ ಸಾಂಸ್ಕೃತಿಕ ಕಾರ್ಯಕ್ರಮಗಳಿರುತ್ತವೆ. ಹೃಷೀಕೇಶವು ಹಿಮಾಲಯದ ತಪ್ಪಲಿನಲ್ಲಿ ಹರಿದ್ವಾರ ದಿಂದ ಬದರಿ ಕೇದಾರ ಗಂಗೋತ್ರಿ ಯಮುನೋತ್ರಿಗಳಿಗೆ ಹೋಗುವ ಹಾದಿಯಲ್ಲಿ ಹರಿದ್ವಾರದಿಂದ ಹದಿನೈದು ಮೈಲಿಯಂತರದ ಗಂಗಾನದಿಯ ತಟಿಯ ಋಷ್ಯಾಶ್ರಮಗಳ ಧಾಮ. ನಾರಾಯಣ ವನ ಮದರಾಸು ತಿರುಪತಿಗಳ ಮಾರ್ಗದ ಪುತ್ತೂರಿನ ಬಳಿ ಯಿರುವ ಪುರಾಣ ಪ್ರಸಿದ್ಧ ಸ್ಥಳ. ಅಪ್ಪಲಾಯಗುಂಟ ಅದೇ ಪುತ್ತೂರು ಕಾರ್ವೇಟಿನಗರ ಚಿತ್ತೂರುಗಳ ನಡುವೆಯಿರುವ ಪ್ರಶಾಂತ ದಿವ್ಯಸ್ಥಳ. ಮೂರೂ ಕಡೆಯೂ ಒಂದೇ ಬಾರಿಗೆ ಬ್ರಹ್ಮೋತ್ಸವಗಳಾಗುವುದು ಭಾರತೀಯ - ಸನಾತನ ಧರ್ಮದ ಮೂಲಭೂತ ಏಕತೆಯ ಪ್ರತೀಕವಾಗಿದೆ.

ನೀವೂ ಬನ್ನಿ ತಿ. ತಿ. ದೇ. ನಿಮ್ಮವರನ್ನೂ ಕರೆತನ್ನಿ



ಗೌರವ ಸಂಪಾದಕರು :
ಎನ್. ರಮೇಶ್‌ಕುಮಾರ್ ಐ.ಎ.ಎಸ್.,
ಕಾರ್ಯನಿರ್ವಹಣಾಧಿಕಾರಿ,
ತಿ.ತಿ.ದೇ. ತಿರುಪತಿ.

ಸಂಪಾದಕ :
ಎನ್.ಎಸ್. ರಾಮಮೂರ್ತಿ, ಎಂ. ಎ.

ಉಪಸಂಪಾದಕ :
ಬಿ. ಎನ್. ಶ್ರೀನಿವಾಸನ್ ಎಂ. ಎ.,

ಮುದ್ರಣ :
ಪಿ. ಮೋಹನ್ ರಾವ್

ಲೇಖನ/ಜಾಹೀರಾತುಗಳಿಗೆ
ಮಿಕ್ಕವಿವರಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ.

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ
ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ
ದೊರೆಯುವುವು

ಬಿಡಿ ಪ್ರತಿ ೪--೦೦

ವಾರ್ಷಿಕ ಚಂದಾ ೪೮--೦೦



ಸಂಪುಟ -- 26 ಮೇ 1996 ಸಂಚಿಕೆ --12

# ವಿಷಯಸೂಚಿ



ಮುಖ ಚಿತ್ರ: ಹನುಮಂತ - ಚಿತ್ರ - ಜಗದೀಶ್.

ಹಿಂಬದಿಯಲ್ಲಿ: ಹೃಷೀಕೇಶದ ಶ್ರೀ ವೆಂಕಟೇಶ್ವರಸ್ವಾಮಿ ಆಲಯ.

ಒಳಗಡೆ: 1) ಶ್ರೀ ಗೋವಿಂದರಾಜಸ್ವಾಮಿ ಆಲಯದಲ್ಲಿನ ಬ್ರಹ್ಮೋತ್ಸವದಲ್ಲಿ ಮೋಹಿನೀ ಅವತಾರ.

2) ನಾರಾಯಣವನಂ ಕಲ್ಯಾಣ ವೆಂಕಟೇಶ್ವರಸ್ವಾಮಿ ಆಲಯ.





# ಸಂಪಾದಕೀಯ

ಕಲಿಯುಗದಲ್ಲಿ ಪರಿನಾಮವ ನೆನೆದರೆ ಭಯವಿಲ್ಲವಂತೆ. ಇತರ ಯುಗಗಳಲ್ಲಿ ಗಿಂತ ಕಲಿಯುಗದಲ್ಲಿ 'ಅವನನ್ನು' ಒಲಿಸುವುದು ಸುಲಭವೆಂದರು ಹಿರಿಯರು, ಕಾರಣ ಕಲಿಯುಗದಲ್ಲಿ ಸಂಕೀರ್ತನೆಯೊಂದು ಸಾಕು; ಕರೆದಲ್ಲಿಗೆ ಬರುವ ಹರಿ ನಮ್ಮನ್ನು ಭವಸಾಗರದಿಂದ ಕರೆಗೊಯ್ಯಲು. ಇಂತಲ್ಲಿ ಸುಲಭವಾದ ಹಾದಿಯನ್ನು ಹಿಡಿದು ನಡೆಯುವುದು ಅಷ್ಟೇನೂ ಕಷ್ಟ ಆಗಬಾರದು. ಆದರೂ ಮನುಷ್ಯ ಕಷ್ಟ ಪಡುತ್ತಲೇ ಇದ್ದಾನೆ ಅಹರ್ನಿಶಿ ಲೋಕದ ವಿವಿಧ ಆಕರ್ಷಣೆಯ ಬಣ್ಣದ ಬೆಳಕಿನಲ್ಲಿ. ಒಳಗಿನ ಶತ್ರುಗಳೇ ಎಪ್ಪತ್ತೆಂಟು ರೀತಿಯಲ್ಲಿ ಎಳೆದಾಡುತ್ತ ಪರಸ್ಪರ ಹೊಡೆದಾಡುತ್ತ ಇವನು ಇಲ್ಲಿಯೇ ಮತ್ತೆ ಮತ್ತೆ ಬಂದು ಏನೋ ಹೊಸದನ್ನು ಸಾಧಿಸುವ ಭ್ರಾಂತಿಯನ್ನು ನಿರಂತರವೂ ಉಂಟುಮಾಡುತ್ತಿರುವಾಗ 'ಅವನ' ಬಗ್ಗೆ ಬಂತಿಸಲು ಹೊತ್ತಾದರೂ ಎಲ್ಲಿ ಸಿಗಬೇಕು! 'ಅವನ' ಚಿಂತನೆಗೇ ವ್ಯವಧಿಯಿಲ್ಲದ ಮೇಲೆ 'ಅವನನ್ನು' ಒಲಿಸುವ ಮಾತು - ಅದೆಷ್ಟೇ ಸುಲಭವಾದರೂ - ದೂರವೇ ಉಳಿಯುತ್ತದೆ.

ಇಂತಹ ವ್ಯವಧಿ ರಹಿತ ತುರ್ತುಗಳು - ತುರಿಕೆಗಳು ಉಂಟಾಗುವುದೆಂದೇ 'ನಾನಾಟಿ ಬ್ರದುಕು ನಾಟಕಮು' ಎನ್ನುತ್ತ ನಿಜದ ಕಡೆ ಗಮನ ಸೆಳೆಯಲು ಪ್ರಯತ್ನಿಸಿದರು ಹರಿದಾಸರು. ಅವರಿಗೆ ಇದೊಂದು 'ಇದ್ದು ಜೈಸುವ ಕರ್ಮಭೂಮಿ'. ಅವನಿಂದ ಸೈ ಅನ್ನಿಸಿಕೊಳ್ಳಬೇಕು ಎಂಬ ಆಟದ ಉದಾರ ಮನೋಭಾವ. ಇಂತಲ್ಲಿ ಅನ್ನಮಾಚಾರ್ಯರಂತಹ ಹಿರಿಯರು ಇದ್ದಾರೆ. 'ಒಂದು ಸಂಕೀರ್ತನೆಯೇ ಸಾಕು ನಮ್ಮನ್ನು ಹೊದಿಕೆಯಂತೆ ರಕ್ಷಾಕವಚದಂತೆ ರಕ್ಷಿಸಲು; ಮಿಕ್ಕದ್ದು ನಿನ್ನ ಭಂಡಾರದಲ್ಲಿರಲಿ' ಎಂದವರು. ಈ ಮಿಕ್ಕದ್ದು ಮೂವತ್ತೆರಡು ಸಾವಿರವೆಂದರೆ ಅವರ ಮಾಸಲಳಿಯದ ಭಕ್ತಿಯ ಅಪರಂಪಾರತೆಯ ಅರಿವಾದೀತು. ಕುಳಿತಲ್ಲಿ, ನಿಂತಲ್ಲಿ, ನಡೆದಲ್ಲಿ, ಎಡವಿದಲ್ಲೂ ವೆಂಕಟೇಶ್ವರಸ್ವಾಮಿ ಅವರಿಗೆ ಮಿತ್ರ, ಬಂಧು, ತಂದೆ, ಗುರು, ತಾಯಿ, ನೆಂಟ, ಎಂದೇ ಅವನ ಪಾದಕ್ಕೆ ದಿಂಡುರುಳಿ ಬಿದ್ದು ಹಾಡಿದರು - ಬದುಕಿದ್ದಾಗಲೇ ದೇರೆ ಒಂದಿಲ್ಲವಾದರು; ದೇರಿಲ್ಲವಾದರು.

ಅನ್ನಮಾಚಾರ್ಯ ಭಗವಂತನ ನಂದಕಾಂಶವಾಗಿ ಅವರ ಕಥೆ ಬೇರೆ ಎಂದೂ, ಅವರ ಆದರ್ಶ, ಭಕ್ತಿ ನಮಗೆ ಎಲ್ಲಿಂದ ಸಾಧ್ಯ ಎಂದು ಕೈಚೆಲ್ಲಿ, ದೂರದಿಂದ ಅವರಿಗೆ ನಮಿಸಿ ಹೊರಡುವುದು ಸುಲಭವೇ ಆಗಬಹುದು. ಆದರೆ ಅನ್ನಮಾಚಾರ್ಯ ನಮಗೆ ದೇರೆ ಯಾದರೂ ದೇರು ಆಗಬಲ್ಲರು; ಅವರ ಮೂಲಕ ನಾವೂ ಬೆಳೆಯಬಹುದು ಎಂಬುದು ಮನಸ್ಸಿಗೆ ಬರುವಲ್ಲಿ ಅವರ ಕೀರ್ತನೆಗಳು ಅರ್ಥವಂತಿಕೆಯನ್ನು ಪಡೆಯುತ್ತವೆ ನಮ್ಮ ಅಂತರಂಗದಲ್ಲಿ. ಹಾಗಾಗಿ ಆ ದೇರು ಉಂಡ ನೀರನ್ನು ಅದರ ಶಾಖೆಗಳಾಗಿ ನಾವೂ ಪಡೆಯಬಹುದು, ಅವರ ಕೀರ್ತನೆಗಳ ಮೂಲಕ. ಅವುಗಳನ್ನು ಆಲಾಪಿಸುವ, ಮನನ ಮಾಡುವ ಪ್ರಯತ್ನ ಪಟ್ಟದ್ದೇ ಆದರೆ ತವನಿಧಿಯೇ ದೊರೆತೀತು.

ಇಷ್ಟೆಲ್ಲ ಹೇಳಿದರೂ ಮನಸ್ಸಿಗೆ ಸಮತೆಯಿಲ್ಲ, ಬಿಡುವು ಮೊದಲೇ ಇಲ್ಲ ಎಂಬ ವಾದಗಳೂ ಉಂಟಾಗಬಹುದು. ಗೋವಿಂದನಾಮವನ್ನು ನಾಲಗೆಯ ಮೇಲೆ ತಂದುಕೊಳ್ಳಲು ಮುಹೂರ್ತ ನೋಡುವುದೇಕೆ ? ಹಲವು ಬಾರಿ ಅದು ಬಂದಮೇಲೆ ಚಿತ್ತ ಸಮತೆ, ಬಿಡುವು ತಾನಾಗಿಯೇ ಬರುವುದೆಂಬ ಭರವಸೆಯೂ ಉಂಟು. ಹಾಗಾಗಿ ಅನ್ನಮಾಚಾರ್ಯರ ಜಯಂತಿಯ ಈ ಹೊತ್ತಿನಲ್ಲಿ ಅವರ ಹಲವು ಕೃತಿಗಳನ್ನಾದರೂ ನಾಲಗೆಗೆ ತಂದುಕೊಳ್ಳಬೇಕು. ಮಿದುಳಿನಲ್ಲಿ ಮಂಥನವಾಗಬೇಕೆಂದು 'ಅವನನ್ನೇ' ಬೇಡುವ.

# ಹಿಂದೂಧರ್ಮ

## ಒಂದು ವಿಹಂಗಮ ನೋಟ

---ಎಚ್. ವಿ. ನರಸಿಂಹಮೂರ್ತಿ.

ಅನೇಕ ಜಾತಿ ಮತ ಪಂಥಗಳನ್ನೊಳಗೊಂಡ ನಮ್ಮ ಸನಾತನ ಧರ್ಮ ವಿಶ್ವವಿಶಾಲ ಹರಹುಳ್ಳ, ಶಾಖೋಪಶಾಖೆಗಳಿಂದ ಕೂಡಿದ ಒಂದು ಮಹಾ ವಟವೃಕ್ಷ. ಅನೇಕ ರೆಂಬೆ - ಕೊಂಬೆಗಳಂತಿರುವ ಜಾತಿ - ಮತ - ಪಂಥಗಳಿಗೆ ಜೀವಸ್ರೋತವಾಗಿ, ಪ್ರಾಣಸ್ಪಂದಿಯಾಗಿ, ಶಕ್ತಿದಾಯಿಯಾಗಿ, ಪುಷ್ಟಿವರ್ಧಿನಿಯಾಗಿ ತಾಯಿಬೇರಿನಂತಿದೆ, ಈ ಸನಾತನ ಧರ್ಮ. ಇಹವನ್ನು ಹಳಿಯದೆ, ಪರವನ್ನು ಬಿಡದೆ, ಸುಂದರ ಸುವ್ಯವಸ್ಥಿತ ಸಾರ್ಥಕ ಜೀವನ ಕಲೆಯ ತತ್ವಗಳನ್ನುಳ್ಳ, ಉಚ್ಚ ಜೀವನ ಮೌಲ್ಯಗಳನ್ನು ಪ್ರತಿಪಾದಿಸುವ ಹಿರಿಯಧರ್ಮ, ಇದು. ವ್ಯಕ್ತಿ - ವ್ಯಕ್ತಿಗಳನ್ನು ಒಂದುಗೂಡಿಸಿ, ಶಾಂತಿ - ಸಹನೆ - ಸೌಹಾರ್ದದಿಂದ ಬಾಳುವಂತೆ ಮಾಡಿ ಬದುಕನ್ನು ಬಂಗಾರವಾಗಿಸುವ ಉದಾತ್ತಧರ್ಮ - ಈ ಸನಾತನ ಹಿಂದೂ ಧರ್ಮ.

### ವಿಶಿಷ್ಟ ಹೆಸರು :

'ಸನಾತನ ಧರ್ಮ' ಎಂಬುದು ಹಿಂದೂ ಧರ್ಮದ ನಿಜವಾದ ಹೆಸರು. 'ಸನಾ ಆತ ನೋತಿ ಇತಿ ಸನಾತನಃ'; ಅಂದರೆ ಬದುಕನ್ನು ಬಂಗಾರಗೊಳಿಸುವ ಶಾಶ್ವತ ಮೌಲ್ಯಗಳುಳ್ಳದ್ದರಿಂದ ಇದು ಸನಾತನ ಧರ್ಮ. (ಏಷ ಧರ್ಮಃ ಸನಾತನಃ - ಮನು) ವೇದಪ್ರಣೀತ ಧರ್ಮವಾದ್ದರಿಂದ ಇದನ್ನು 'ವೈದಿಕ ಧರ್ಮ' ಎಂದೂ ಕರೆಯುತ್ತಾರೆ. 'ಆರ್ಯ ಧರ್ಮ' ಎಂಬುದು ಸನಾತನ ಹಿಂದೂ ಧರ್ಮದ ಮತ್ತೊಂದು ಹೆಸರು. ಈ 'ಆರ್ಯ' ಎಂಬ ಪದವೇ ಬಹಳ ವಿಶಿಷ್ಟವಾದುದು. ಏನೆಲ್ಲ ಸಭ್ಯತೆ, ಸಂಸ್ಕೃತಿ, ಶ್ರೇಷ್ಠತೆಯುಂಟೋ ಅದೆಲ್ಲವನ್ನೂ ಮೈಗೂಡಿಸಿಕೊಂಡಿರುವವ 'ಆರ್ಯ'. (ಕುಲಂ ಶೀಲಂ ದಯಾ ದಾನಂ ಸತ್ಯ ಧರ್ಮಃ ಕೃತಜ್ಞತಾ ಅದ್ರೋಹಂತಿ ಏಷ್ಯೇತತ್ ತಾನಾರ್ಯಾನ್ ಸಂಪ್ರಚಕ್ಷತೇ) ಅಂಥವನು ಯಾವ ಜಾತಿ-ಮತ-ಪಂಥ ತನ್ನದೇಶದಲ್ಲಿದ್ದರೇನು, ಹೊರದೇಶದಲ್ಲಿದ್ದರೇನು ? ಅವನು ಎಂದೆಂದಿಗೂ ಆರ್ಯನೇ. ಅವನು ಆರ್ಯನಾಗಲು ಯಾವ ವಿಶಿಷ್ಟ ಜೀವನ ವಿಧಾನ ಅನುಸರಿಸುವನೋ (ಕರ್ತವ್ಯಮಾಚರನ್ ಕರ್ಮ ಅಕರ್ತವ್ಯ ಮಾನಚರನ್, ತಿಷ್ಠತಿ ಪ್ರಕೃತಾಚಾರೇ ಸವಾ ಆರ್ಯ ಇತಿಸ್ಮೃತಃ) ಅದೇ ಆರ್ಯಧರ್ಮ.

ಹಾಗಾದರೆ ಈ ಸನಾತನ - ಆರ್ಯ - ವೈದಿಕ ಧರ್ಮಕ್ಕೆ 'ಹಿಂದೂ ಧರ್ಮ'ವೆಂದು ಹೆಸರು ಬಂದುದು ಹೇಗೆ? ಸಿಂಧೂನದಿ ಬಯಲಿನಲ್ಲಿ ನಮ್ಮ ಹಿರಿಯರು ನೆಲಸಿದ್ದರಷ್ಟೆ. ಪರ್ಷಿಯನ್ನರು ನಮ್ಮ ಆರ್ಯಭೂಮಿಯ ಒಂದು ಭಾಗವಾದ ಸಿಂಧೂನದಿಯ ಬಯಲಿಗೆ ಬಂದರು; ತಿಳಿನೀರಿನಿಂದ ತುಂಬಿ ಜುಳು - ಜುಳು ಹರಿಯುವ ಸಿಂಧೂನದಿಯನ್ನು ಕಂಡು ಕೈಮುಗಿದರು. ಅವರ ಭಾಷೆಯ ಉಚ್ಚಾರಣೆಯಲ್ಲಿ ಸಂಸ್ಕೃತದ 'ಸ' ಕಾರವೆಲ್ಲ 'ಹ' ಕಾರವಾಗುತ್ತದೆ. 'ಸಿಂಧೂ' ಎಂಬ ಪದ ಅವರ ಭಾಷೆಯ ಉಚ್ಚಾರಣೆಯಲ್ಲಿ 'ಹಿಂದೂ' ಆಯಿತು. ಸಿಂಧೂನದಿಯ ಬಯಲಿನ ಆರ್ಯರು ಆಚರಿಸುತ್ತಿದ್ದ ಧರ್ಮ 'ಹಿಂದೂ ಧರ್ಮ' ಆಯಿತು - ಇದು ವೇದಾಂತ ಕೇಸರಿ ಸ್ವಾಮಿ ವಿವೇಕಾನಂದರ ಅಭಿಪ್ರಾಯ.

'ಹಿಂದೂ ಧರ್ಮ' ಎಂಬುದು ಬೇರೆಯವರು ಕೊಟ್ಟ ಹೆಸರಲ್ಲ; ನಮ್ಮವರೇ ಇಟ್ಟ ಹೆಸರು - ಎಂಬುದು ಕೆಲವರ ಅಭಿಮತ. ಅವರ ಅರ್ಥದಲ್ಲಿ 'ಹೀನಂ ದೂಷಯತಿ ಇತಿ ಹಿಂದುಃ' - ಹೀನವಾದುದನ್ನು - ದೂಷ್ಯವಾದುದನ್ನು - ದೂಷಿಸುವವನು 'ಹಿಂದೂ' ಅವನು ಅನುಸರಿಸುವ ಉದಾತ್ತಜೀವನವಿಧಾನ 'ಹಿಂದೂ ಧರ್ಮ.' 'ಹಿಮಾಲಯಂ ಸಮಾರಭ್ಯ ಯಾವದಿಂದು ಸರೋವರಂ, ತಂ ದೇವನಿರ್ಮಿತಂ ದೇಶಂ ಹಿಂದೂಸ್ಥಾನಂ ಪ್ರಚಕ್ಷತೇ' - ಎಂದು ಬೃಹಸ್ಪತಿ ಆಗಮದಲ್ಲಿ ಬರುವ ಈ ಶ್ಲೋಕ ಹಿಂದೂ ದೇಶದ ಗಡಿಯನ್ನು ಗುರುತಿಸುತ್ತದೆ. ಮಾತ್ರವಲ್ಲ, ದೇವನಿರ್ಮಿತವಾದ ಮತ್ತು ಹಿಮಾಲಯದಿಂದ ಇಂದು ಸರೋವರದವರೆಗೆ ವ್ಯಾಪಿಸಿರುವ ದಿವ್ಯ - ಭವ್ಯ ಪ್ರದೇಶವೇ 'ಹಿಂದೂ ದೇಶ' - ಎಂದು ಸೂಚಿಸುತ್ತದೆ. ಒಟ್ಟಿನಲ್ಲಿ ಹೆಸರು ಏನೇ ಇರಲಿ, ಹೇಗೇ ಬಂದಿರಲಿ - ಪ್ರತಿಯೊಬ್ಬ ಮಾನವನ ವ್ಯಕ್ತಿತ್ವ ಪೂರ್ಣ ಪ್ರಮಾಣದಲ್ಲಿ ವಿಕಾಸಗೊಂಡು, ಇಂದಲ್ಲ ನಾಳೆ 'ಜೀವ'ನು 'ದೇವ' ನಾಗುವುದಕ್ಕೆ ಅವಕಾಶ ಕಲ್ಪಿಸಿಕೊಟ್ಟಿರುವ ಜೀವನ ವಿಕಾಸವಿಧಾನವೇ ಸನಾತನ ಹಿಂದೂಧರ್ಮ.

### ಅನಾದಿ - ಅನಂತ :

ಜಗತ್ತಿನ ಇತರ ಯಾವುದೇ ಧರ್ಮವನ್ನು ಪರಿಶೀಲಿಸಿದರೂ ಅದಕ್ಕೊಬ್ಬ ಸಂಸ್ಥಾಪಕನಿರುವುದು ಕಂಡು ಬರುತ್ತದೆ. ಅವನ ಹೆಸರಿನಲ್ಲಿ ಆ ಧರ್ಮ ಪ್ರಸಾರವಾಗಿ ಬೆಳಕಿಗೆ ಬರುವುದನ್ನು ಗಮನಿಸುತ್ತೇವೆ. ಆದರೆ ನಮ್ಮ ಸನಾತನ ಹಿಂದೂ ಧರ್ಮಕ್ಕೆ ಯಾರೋ ಒಬ್ಬ ಸಂಸ್ಥಾಪಕನಾಗಲಿ, ಪ್ರವರ್ತಕನಾಗಲಿ ಇಲ್ಲದೆ ಇರುವುದೇ ಅದರ ವೈಶಿಷ್ಟ್ಯ. ಪ್ರಾಚೀನ ಭಾರತದಲ್ಲಿ ವ್ಯಕ್ತಿಗಲ್ಲ ಪುರಸ್ಕಾರ; ತತ್ವಕ್ಕೆ

ಪ್ರಪಂಚದ ಯಾವುದೇ ಭಾಗದಲ್ಲಿ ಇನ್ನೂ ಸಂಸ್ಕೃತಿ - ನಾಗರಿಕತೆಗಳು ಮೂಡದೆ ಇದ್ದ ಅಂಧಕಾರ ಕಾಲ! ಆದರೆ ಆಗಲೇ ಪವಿತ್ರ ಭಾರತದಲ್ಲಿ ಉನ್ನತಮಟ್ಟದ ಸಂಸ್ಕೃತಿ - ಸಭ್ಯತೆಗಳು ಅರಳಿ ಜಗತ್ತಿಗೇ ತಮ್ಮ ಸೌರಭ ಬೀರುತ್ತಿದ್ದುವು. ಜನಸಾಮಾನ್ಯರೂ ಸಹ ಜೀವ - ಜಗತ್ತು - ಈಶ್ವರ - ಈ ಮೂರರ ಸಂಬಂಧ ಕುರಿತು ಚಿಂತಿಸುತ್ತಿದ್ದರು - ಅಂದಾಗ ಈ ಹಿಂದೂಧರ್ಮ ಎಷ್ಟೊಂದು ಪ್ರಾಚೀನ ಎಂಬುದನ್ನು ಯೋಚಿಸಲು ಸಹ ಆಗುವುದಿಲ್ಲ. ಒಬ್ಬ ಋಷಿ - ಮುನಿ, ಮಹಾತ್ಮನಿಂದಲೋ ರಚಿಸಲ್ಪಡದೆ ಸಹಸ್ರ



- ಸಹಸ್ರ ಋಷಿ - ಮುನಿಗಳು, ಸಾಧು ಸಂತರು, ಸತ್ಯವನ್ನು ಪ್ರತಿಪಾದಿಸಿ, ಲೋಕಸಂಗ್ರಹಾರ್ಥವಾಗಿ ಪೀಳಿಗೆಯಿಂದ ಪೀಳಿಗೆಗೆ ದತ್ತಿಬಿಟ್ಟು ಹೋಗಿರುವ ಅಧ್ಯಾತ್ಮನಿಧಿಯ, ಜೀವನ ಮೌಲ್ಯಗಳ, ಜೀವನ ವಿಧಾನ ಸೂತ್ರಗಳ ಒಟ್ಟು ಮೊತ್ತವೇ ವೇದ. ಜ್ಞಾನಾರ್ಥಕನಾದ 'ವಿದ್' ಧಾತುವಿನಿಂದ 'ವೇದ' ಶಬ್ದ ಮೂಡಿ ಬಂದಿದೆ. 'ಯಾವ ಒಂದನ್ನು ತಿಳಿದರೆ ಬೇರೆಲ್ಲದರ ತಿಳುವಳಿಕೆಯಾಗುವುದೋ (ಯಸ್ಮಿನ್ ಖಲು ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತಿ - ಉಪನಿಷತ್ತು) ಅದಿ ಇದ್ದರೆ ತಾನೇ ಅಂತ್ಯ! ಹಾಗಾಗಿ ವೇದದ ತಳಹದಿಯ ಮೇಲೆ ಭದ್ರವಾಗಿ ನಿಂತಿರುವ ಸನಾತನ ಧರ್ಮವೂ ಅನಾದಿ; ಅನಂತ.

## ಆಕರ ಗ್ರಂಥಗಳು :

ಈ ವೇದಗಳು ಮಾತ್ರವಲ್ಲದೆ ಉಪನಿಷತ್ತು, ಬ್ರಹ್ಮಸೂತ್ರ ಮತ್ತು ಭಗವದ್ಗೀತೆಗಳು ಸನಾತನ ಹಿಂದೂ ಧರ್ಮದ ಆಕರ ಗ್ರಂಥಗಳು. ಆಚಾರ್ಯತ್ರಯರಿಂದಲೂ ಮಾನ್ಯತೆ ಪಡೆದ ಪ್ರಸ್ಥಾನತ್ರಯಗಳು, ಇವು. ರಾಮಾಯಣ - ಮಹಾಭಾರತಗಳು ಹಿಂದೂ ಸಮಾಜದ ಮತ್ತು ಸಂಸ್ಕೃತಿಯ ಇತಿಹಾಸಗಳಾಗಿ ಸನಾತನ ಧರ್ಮದ ಆಧಾರಗ್ರಂಥಗಳಾಗಿವೆ. ಮನು - ಯಾಜ್ಞವಲ್ಕ್ಯ - ಪರಾಶರರ ಸ್ಮೃತಿಗಳು, ಶ್ರೀಮದ್ಭಾಗವತವನ್ನೂ ಒಳಗೊಂಡ ಪುರಾಣಗಳು ಮತ್ತು ಉಪಪುರಾಣಗಳು, ಆಗಮಗಳು ಹಾಗೂ ದರ್ಶನಗ್ರಂಥಗಳು - ಇವೆಲ್ಲ ವೇದಗಳೆಂಬ ಭದ್ರ ಬುನಾದಿಯ ಮೇಲೆ ಎದ್ದು ನಿಂತಿರುವ ಸನಾತನ ಹಿಂದೂ ಧರ್ಮವೆಂಬ ಮಹಾ ಸೌಧದ ಇಟ್ಟಿಗೆಗಳು. ಈ ಎಲ್ಲ ಗ್ರಂಥಗಳಲ್ಲಿ ಪ್ರತಿಪಾದಿತವಾದ ಮೂಲತತ್ತ್ವಗಳನ್ನು ಯಾರು ಬೇಕಾದರೂ, ಎಲ್ಲಿಯಾದರೂ, ಯಾವಾಗಲಾದರೂ ತಮ್ಮ ಜೀವನದಲ್ಲಿ ಪ್ರಯೋಗಕ್ಕೆ ಅಳವಡಿಸಿಕೊಂಡು ಅಧ್ಯಾತ್ಮಸಿದ್ಧಿ ಪಡೆಯಬಹುದು. ಒಬ್ಬ ವಿಜ್ಞಾನಿ ತನ್ನ ಪ್ರಯೋಗಶಾಲೆಯಲ್ಲಿ 'ವೈಜ್ಞಾನಿಕ ಸತ್ಯಶೋಧನೆ' ಮಾಡುವಂತೆ ಸಾಧಕ ತನ್ನ ಬದುಕೆಂಬ ಪ್ರಯೋಗಶಾಲೆಯಲ್ಲಿ 'ಅಧ್ಯಾತ್ಮ ಸತ್ಯಶೋಧನೆ' ನಡೆಸಲು ವಿಪುಲವಾದ ಅವಕಾಶವಿದೆ, ನಮ್ಮ ಧರ್ಮದಲ್ಲಿ. ಇಷ್ಟೊಂದು ಉದಾರಸ್ವಾತಂತ್ರ್ಯ ಬಹುಶಃ ಜಗತ್ತಿನ ಯಾವ ಧರ್ಮದಲ್ಲೂ ಇಲ್ಲ.

## ಧರ್ಮ ಸಂದೇಶ :

ಸರಳವಾಗಿ ಹೇಳಬೇಕೆಂದರೆ 'ಧರ್ಮ'ವೆಂದರೆ ಆಚಾರಸಂಹಿತೆ. ಮಾನವನ ಆಚಾರ - ವಿಚಾರ, ನಡೆ - ನುಡಿ - ಎಲ್ಲವೂ ಒಳಿತಾಗಿರಬೇಕು; ಅವನು ಮಾಡುವ ಪ್ರತಿಯೊಂದು ಕಾರ್ಯದ ಹಿಂದೆ 'ಅಪೂರ್ವಶಕ್ತಿ'ಯೊಂದಿದೆ - ಎಂಬ ಅರಿವಿರಬೇಕು. ಅವನು ನೋಡುವುದು, ಕೇಳುವುದು, ಮಾಡುವುದು - ಎಲ್ಲವೂ ಮಂಗಳಕರವಾಗಿರಬೇಕು. ಸನಾತನ ಹಿಂದೂ ಧರ್ಮ ಸಾರಿಹೇಳುವುದು ಇದನ್ನೇ :

ಓಂ ಭದ್ರಂ ಕರ್ಣೇಭಿಃ  
ಶೃಣುಯಾಮದೇವಾಃ  
ಭದ್ರಂ ಪಶ್ಯೇಮಾಕ್ಷಭಿರ್ಯ ಜತ್ರಾಃ  
ಸ್ಥಿರೈರಂಗೈಸ್ತುಷ್ಟುವಾಂ ಸಸ್ತನೂಭಿಃ  
ವ್ಯಶೇಮ ದೇವಹಿತಂ ಯದಾಯುಃ

ಅಂದರೆ 'ಓಜ್ಯೋತಿಸ್ವರೂಪಿಗಳಾದ ದೇವತೆಗಳೆ! ನಮ್ಮ ಕಿವಿಗಳು ಮಂಗಳಕರವಾದುದನ್ನು ಕೇಳಲಿ; ನಮ್ಮ ಕಣ್ಣುಗಳು ಪವಿತ್ರವಾದುದನ್ನು ಕಾಣಲಿ; ನಿಮ್ಮನ್ನು ಸ್ತುತಿಸುತ್ತಾ ನಮಗೆ ಕೊಟ್ಟಿರುವ ಆಯಸ್ಸನ್ನು ದೃಢಕಾಯರಾಗಿ ಕಳೆಯುವಂತಾಗಲಿ! ಇಹವನ್ನು ಭೋಗಿಸಿ; ಪರವನ್ನು ಪೂಜಿಸಿ; ನೂರು ವರ್ಷ ಬಾಳಿ (ಶತಂ ಜೀವ ಶರದಃ) - ಎಂಬ ಯೋಗಭೋಗಗಳ ಸಮನ್ವಯದ ಈ ಸಂದೇಶ ಯಾರಿಗೆ ಬೇಡ?

ವೇದಗಳು ನಮ್ಮನ್ನು ಬೋಧಿಸುವುದು 'ಅಮೃತಸ್ಯ ಪುತ್ರಾಃ' ಎಂದು. ನಾವೆಲ್ಲ ಅಮೃತಸ್ವರೂಪಿಯಾದ - ಅವಿನಾಶಿಯಾದ - ಪರಮಾತ್ಮನ ಕಿಡಿಗಳು. ಅದನ್ನು ಮರೆತದ್ದರಿಂದಲೇ ನಮಗೆ ಈ ಪಾಡು. ಆದ್ದರಿಂದ ನಿಮ್ಮ ನಿಜಸ್ವರೂಪವನ್ನು ಅರಿತುಕೊಳ್ಳಿ; ದೈವೀಗುಣಗಳನ್ನು ಬೆಳೆಸಿಕೊಳ್ಳಿ; ಬುದ್ಧಿಯನ್ನು ಪ್ರಚೋದಿಸಿಕೊಂಡು ಜೀವನವನ್ನು ಸಾರ್ಥಕಪಡಿಸಿಕೊಳ್ಳಿ - ಎನ್ನುತ್ತದೆ - ನಮ್ಮ ಧರ್ಮ.

'ದೇವನೊಬ್ಬ ನಾಮ ಹಲವು'- ಏಕಂಸತ್ ವಿಪ್ರಾ ಬಹುಧಾ ವದನ್ತಿ - ಎಂಬುದು ನಮ್ಮ ಧರ್ಮದ ಸಿದ್ಧಾಂತ. ಮಾನವನ ಬುದ್ಧಿವಿಕಾಸ, ಮನೋವಿಕಾಸ, ಆತ್ಮವಿಕಾಸ ಒಂದೇ ಮಟ್ಟದಲ್ಲಿರದೆ ಬೇರೆ - ಬೇರೆಯದಾಗಿರುತ್ತದೆ.

ಇದನ್ನು ಈಗಿನ ಮನಃಶಾಸ್ತ್ರಜ್ಞರೂ ಒಪ್ಪುತ್ತಾರೆ. ಅವರವರಿಗೆ ಅವರವರ ಮತ - ಪಂಥ - ದೇವರುಗಳಿರಲಿ; ಬೇಡವೆಂದವರಾರು? ಅವರೆಲ್ಲರೂ ಪೂಜಿಸುವುದು ಒಬ್ಬ ದೇವನ ಅನೇಕ ರೂಪಗಳನ್ನು. ಭಗವದ್ಗೀತೆಯಲ್ಲಿ ಶ್ರೀಕೃಷ್ಣ ಇದನ್ನು ಹೀಗೆ ಪುಷ್ಟೀಕರಿಸುತ್ತಾನೆ: 'ಯಾವ - ಯಾವ ಭಕ್ತನು ಯಾವ - ಯಾವ ದೇವತಾಮೂರ್ತಿಯನ್ನು ಶ್ರದ್ಧೆಯಿಂದ ಪೂಜಿಸಲು ಇಚ್ಛಿಸುವನೋ, ಅವನವನಿಗೆ ಅದೇ ಅಚಲವಾದ ಶ್ರದ್ಧೆಯನ್ನು ನಾನು ಕೊಡುವೆನು. (ಯೋಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾऽರ್ಚಿತು ಮಿಚ್ಛತಿ, ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದ ಧಾಮ್ಯಹಂ)

ನಮ್ಮ ಧರ್ಮದಲ್ಲಿರುವಷ್ಟು ಪೂಜಾಸ್ವಾತಂತ್ರ್ಯ ಬಹುಶಃ ಜಗತ್ತಿನ ಮತ್ತಾವ ಧರ್ಮದಲ್ಲೂ ಇರದು. ಯಾರು ಯಾವ ದೇವನನ್ನೇ ಪೂಜಿಸಲಿ, ಅದೆಲ್ಲವೂ - ಬೇರೆ - ಬೇರೆ ನದಿಗಳು ಸಮುದ್ರವನ್ನೇ ಸೇರುವಂತೆ - ಒಬ್ಬನೇ ಆದ ಪರಮಾತ್ಮನಿಗೆ ಸಲ್ಲುತ್ತದೆ - ಎಂದು ಉದ್ಘೋಷಿಸಲಾಗಿದೆ. ಹೀಗೆ ಮೂರ್ತಿಪೂಜೆಯಕಲ್ಪನೆ, ಬಹುದೇವತಾ ಪೂಜೆಯ ಮರ್ಮ ಹಾಗೂ ಸಾಕಾರದಿಂದ ನಿರಾಕಾರದ ವರೆಗಿನ ಮಜಲುಗಳನ್ನು ವೈಜ್ಞಾನಿಕವಾಗಿ ನಿರೂಪಿಸುತ್ತವೆ, ಈ ಉದ್ಘೋಷ.

ಸನಾತನ ಹಿಂದೂ ಧರ್ಮ ನೀಡಿದ ಸಮಾಜ ಸುಧಾರಣೆಯ ಸಂದೇಶ ಇಂದಿಗೂ ತೀರ ಪ್ರಸ್ತುತ. ಆರ್ಷಕಾಲದ ಆರ್ಯ ಋಷಿಗಳು, ದಾರ್ಶನಿಕ ಕವಿಗಳು ಸಮಾಜದ ಎಲ್ಲ ವರ್ಗದವರಿಗೂ ಹಿತಬಯಸಿದ ವಿಶ್ವಕುಟುಂಬಿಗಳು. 'ಸರ್ವೇऽಪಿ ಸುಖಿನಃ ಸಂತು, ಸರ್ವೇ ಸಂತು ನಿರಾಮಯಾಃ' - ಎಲ್ಲರೂ ಸುಖವಾಗಿರಲಿ; ಎಲ್ಲರೂ ನೀರೋಗಿಗಳಾಗಿ ಬಾಳಲಿ - ಎಂಬುದು ಅವರ ದಿನನಿತ್ಯದ ಪ್ರಾರ್ಥನೆ. ಸಮಾಜದ ಪೋಷಣೆಗಾಗಿ ಯಾರ್ಯಾರು ದುಡಿದು ತಮ್ಮ ನಿಷ್ಕಾಮ ಕರ್ಮದ ಕುಸುಮಗಳನ್ನು ಅರ್ಪಿಸುತ್ತಾರೋ ಅವರೆಲ್ಲ ಅಭಿನಂದನಾರ್ಹರೇ, ನಮ್ಮ ಋಷಿ - ಮುನಿಗಳಿಗೆ. ಕುಂಬಾರನಿಗೆ, ಕಮ್ಮಾರನಿಗೆ, ಬೇಟೆಗಾರನಿಗೆ - ಎಲ್ಲರಿಗೂ ನಮಸ್ಕಾರ ಅರ್ಪಿಸುತ್ತಾರೆ, ಅವರು. ಮಾನವತಾವಾದದ ಅರ್ಥಾತ್ ಇಂದಿನ ಸಮಾಜವಾದದ ಉತ್ತುಂಗ ಆದರ್ಶವನ್ನು ಇಲ್ಲಿ ಕಾಣಬಹುದು.

## ಉತ್ತಿಷ್ಠತ - ಜಾಗ್ರತ :

ಚಕ್ರವರ್ತಿ ರಾಜಗೋಪಾಲಾಚಾರ್ಯರು ತಮ್ಮ ಅಮೂಲ್ಯ ಹೊತ್ತಿಗೆ 'Hinduism, Doctrine and way of life' ನಲ್ಲಿ ತುಂಬ ಅಮೂಲ್ಯವಾದ ಈ ಮಾತು ಬರೆಯುತ್ತಾರೆ. There are differences in forms and rituals. But a knowledge of Hinduism will make Hindus better Hindus' ಈ ಮಾತುಗಳೇ ಸಾಕು, ಹಿಂದೂ ಧರ್ಮದ ಸಮನ್ವಯತೆಗೆ; ಹೆಚ್ಚಳಕ್ಕೆ ಹಿರಿಮೆಗೆ. ಸಮನ್ವಯಾತ್ಮಕವಾದ ಸನಾತನ ಹಿಂದೂ ಧರ್ಮವನ್ನು ಸಕಲಧರ್ಮದವರೂ ಆಳವಾಗಿ ಅಭ್ಯಸಿಸಿ, ಉತ್ತಮ ಆದರ್ಶ ಪ್ರಜೆಗಳಾಗಿ ಭಾರತದ ಸಮಗ್ರತೆಯನ್ನು ರಕ್ಷಿಸಬೇಕು; ಏಕತೆಯನ್ನು ಕಾಪಾಡಬೇಕು; ವಿಶ್ವದಲ್ಲಿ ಶಾಂತಿ, ಸ್ನೇಹ, ಸಮೃದ್ಧಿ, ಸೌಹಾರ್ದ ನೆಲೆಸಲು ಶ್ರಮಿಸಬೇಕು; 'ಉತ್ತಿಷ್ಠತ! ಜಾಗ್ರತ!!' ಎಂಬ ಉಪನಿಷದ್ವಾಣಿ ಎಲ್ಲರ ಹೃದಯದಲ್ಲೂ ಮೊಳಗಬೇಕು. *

# ನೀರಾ ನಾರಸಿಂಹ

---ಆದ್ಯರಾಮಾಚಾರ್ಯ.

ವೈದಿಕ ಸಾಹಿತ್ಯದಲ್ಲಿ ನರಸಿಂಹನ ಪಾತ್ರವು ಬಲು ಹಿರಿದಾದುದು. ಅಸುರಿ ಶಕ್ತಿಯನ್ನು ಹೋಗಲಾಡಿಸಲು ಮೃಗಮಾನವ ರೂಪ ಧರಿಸಿದ ಕಥೆಯೂ ಬಹು ರೋಮಾಂಚಕಾರಿ. ನರಸಿಂಹಾವತಾರವಾದುದು ಮೂಲಸ್ಥಾನ ಅಥವಾ ಮುಲ್‌ತಾನ ಎಂಬ ಪ್ರತೀತಿ. ಇಂದು ಈ ಸ್ಥಳವು ಪಾಕಿಸ್ಥಾನಕ್ಕೆ ಸೇರಿದೆ. ಪ್ರಹ್ಲಾದನಿಂದ ಪ್ರತಿಷ್ಠಾಪಿತವಾದ ದೇವಾಲಯ ವಿರುವುದನ್ನು ಅಲ್ಲಿ ಇಂದಿಗೂ ತೋರಿಸುತ್ತಾರೆ.

ನರಸಿಂಹೋಪಾಸನೆಯು ಅತಿ ಪ್ರಾಚೀನವಾದುದು. ರಾಮಕೃಷ್ಣೋಪಾಸನೆಗಿಂತ ಮೊದಲಿನದು. ನಮ್ಮ ನಾಡಿನಲ್ಲಿ ಐದನೇ ಶತಮಾನದಿಂದ ಈ ದೇವನ ಪೂಜಾರಾಧನೆ ನಡೆದು ಬಂದುದಕ್ಕೆ ನಾಗಪುರದ ಸಮೀಪದಲ್ಲಿರುವ ರಾಮಟೇಕ್ ಎಂಬಲ್ಲಿ ಕಾಣಸಿಗುವ ಗುಪ್ತರ ಕಾಲದ ವಾಕಾಟಕ ರಾಣಿ ಪ್ರಭಾವತಿಯು ತನ್ನ ದಿವಂಗತ ಪತಿಯ ಸ್ಮರಣಾರ್ಥವಾಗಿ ನರಸಿಂಹ ದೇವಮಂದಿರವನ್ನು ಪ್ರತಿಷ್ಠಾಪಿಸಿದಳೆಂಬ ಶಿಲಾಲೇಖವಿದೆ. ಶ್ರೀಮದ್ಭಾಗವತ ಗ್ರಂಥದಲ್ಲಿಯೂ ಸಹ ಒಂದು ಕಾಲದಲ್ಲಿ "ಕಾಂತಟ ಕರ್ನಾಟ ಕಾನ್ ದಕ್ಷಿಣ ದೇಶಾನ್" ಅಂದರೆ ಕರ್ನಾಟಕವು ನಾಗಪುರದವರೆಗಿತ್ತೆಂದು ಸೂಚಿಸಲಾಗಿದೆ.

ಕರ್ನಾಟಕ, ಮಹಾರಾಷ್ಟ್ರ ಹಾಗೂ ಆಂಧ್ರಪ್ರದೇಶಗಳಲ್ಲಿ ಅನೇಕ ಪ್ರಸಿದ್ಧ ನರಸಿಂಹ ದೇವಾಲಯಗಳಿವೆ. ಅವುಗಳಲ್ಲಿ ಗೋದಾವರಿ ತೀರದಲ್ಲಿರುವ ಮುದ್ಗಲ ಕ್ಷೇತ್ರ, ರಾಕ್ಷಸಭವನ, ಕೃಷ್ಣಾ ತೀರದಲ್ಲಿರುವ ಶೂರ್ಪಾಲಿ, ಕೊಪ್ಪರ ಮುಖ್ಯ ವಿಜಾಪುರದ ಸಮೀಪದಲ್ಲಿರುವ ತೊರವೆ ನರಸಿಂಹನೂ ಕೃಷ್ಣಾ ತೀರದವನೇ. ಮೇಲುಕೋಟೆಯ ನರಸಿಂಹ, ದೇವರಾಯನ ದುರ್ಗದ ನರಸಿಂಹ, ಮುಳಬಾಗಿಲದಲ್ಲಿರುವ ನರಸಿಂಹ, ಹಂಪೆಯಲ್ಲಿರುವ ಬೃಹದಾಕಾರದ ಲಕ್ಷ್ಮೀ ನರಸಿಂಹ - ಹೀಗೆ ಒಂದಲ್ಲ ಎರಡಲ್ಲ ಅನೇಕ ನರಸಿಂಹ ದೇವಾಲಯಗಳಿವೆ.

## ನೀರಾನರಸಿಂಹ :

ವಿಜಾಪುರದ ಅದಿಲ್‌ಶಾಹಿ ಮನೆತನಕ್ಕೂ ಈ ನರಸಿಂಹ ದೇವನಿಗೂ ವಿಶೇಷ ಸಂಬಂಧ ವಿರುವುದು ಇತಿಹಾಸದ ಅಭ್ಯಾಸದಿಂದ ಗೋಚರವಾಗುತ್ತದೆ. ನರಸಿಂಹನ ಸಾನ್ನಿಧ್ಯವಿರುವ ತೊರವೆಯನ್ನೇ ತನ್ನ ರಾಜಧಾನಿಯಾಗಿ ಮಾಡಿಕೊಳ್ಳುವ ಪ್ರಯತ್ನವೂ ಇಬ್ರಾಹಿಮ ಆದಿಲ್ ಶಹರಿಂದ ನಡೆದುದಕ್ಕೆ ಇಂದಿಗೂ ಸಂಗೀತ ಮಹಲ್ ಸಾಕ್ಷಿಯಾಗಿದೆ. ಅದೇ ರೀತಿ ನೀರಾ ನರಸಿಂಹನಿಗೂ ಅದಿಲ್‌ಶಾಹಿ ಮನೆನಕ್ಕೂ ಸಹ ಒಂದು ನಂಟು.



ತೊರವೆಯ ನರಸಿಂಹ·

ನೀರಾ ನರಸಿಂಹ ಕ್ಷೇತ್ರವು ಭೀಮಾ ಹಾಗೂ ನೀರಾ ನದಿಗಳ ಸಂಗಮಸ್ಥಾನದಲ್ಲಿದೆ. ಕನ್ನಡ ನಾಡಿನ ಅನೇಕ ಕುಟುಂಬಗಳಿಗೆ ನೀರಾ ನರಸಿಂಹಸ್ವಾಮಿ ಕುಲದೇವನಾಗಿದ್ದಾನೆ. ನೀರಾ ನದಿಯ ದಂಡೆಗುಂಟ ಲಕ್ಷ್ಮೀ ತೀರ್ಥ, ಪದ್ಮತೀರ್ಥ, ಶಂಖತೀರ್ಥ, ಗದಾ ತೀರ್ಥ, ಪಿಶಾಚವಿಮೋಚನತೀರ್ಥ, ಗರುಡತೀರ್ಥ, ಇಂದ್ರತೀರ್ಥ, ನರಸಿಂಹತೀರ್ಥ, ಹಂಸತೀರ್ಥ, ತಾರಾತೀರ್ಥ, ಕಪಿಲತೀರ್ಥ ಎಂಬ ತೀರ್ಥಗಳ ವರ್ಣನೆಯು ಇದೆ. ಅದೇ ರೀತಿಯಲ್ಲಿ ಭೀಮಾ ತೀರದ ದಂಡೆಗುಂಟ ದುರ್ಗಾತೀರ್ಥ, ಗೋತೀರ್ಥ, ಭಾನುತೀರ್ಥ, ಚಕ್ರತೀರ್ಥ, ನಂದತೀರ್ಥ, ಮೌಸಲತೀರ್ಥ ಎಂಬ ತೀರ್ಥಗಳಿವೆ. ಆದುದರಿಂದ ನೀರಾ ನರಸಿಂಹ ಕ್ಷೇತ್ರವು ಬಹು ಪವಿತ್ರವಾದ ತೀರ್ಥಕ್ಷೇತ್ರವೆಂಬ ನಂಬಿಕೆ ಅತಿ ಪ್ರಾಚೀನವಾದುದಾಗಿದೆ. ಗುರುಚರಿತೆಯಲ್ಲಿ (೧೫೦೦) ಈ ತೀರ್ಥಗಳ ಉಲ್ಲೇಖವಿದೆಯಾದರೂ ಈ ಕ್ಷೇತ್ರದ ಪರಿಚಯದ ಆರಂಭದ ಕಾಲವು ಮಾತ್ರ ಹದಿನಾರನೇ ಶತಮಾನದ ಮಧ್ಯಭಾಗದಿಂದ ಎಂದು ಹೇಳಬಹುದಾಗಿದೆ.

ಪ್ರಾಚೀನ ದಂತಕಥೆಗಳೊಂದಿಗೆ ಸಂಬಂಧ ಪಡೆದುಕೊಂಡಂತೆ ಇತಿಹಾಸಿಕ ಘಟನೆಗಳೂ ಈ ಕ್ಷೇತ್ರದ ಮಹತಿಗೆ ಪೂರಕವಾಗಿವೆ. ವಿಜಾಪುರದ ಅಲಿ ಆದಿಲ್‌ಶಹನು ಈ ಸಂಗಮ ಸ್ಥಳವನ್ನು ನೋಡಿದಾಗ - ಮೂರು ಭಾಗದಲ್ಲಿ ಹರಿವ ಪ್ರವಾಹ, ಒಂದು ಭಾಗದಲ್ಲಿರುವ ನೆಲ ಇದೆಲ್ಲವನ್ನು - ಕಂಡಾಗ ಆತನು ತನ್ನ ಸೇನಾಠಾಣೆಗೆ ಇದು ಯೋಗ್ಯವಾದ ಸ್ಥಳವೆಂದು ಭಾವಿಸಿ ಭದ್ರವಾದ ಕೋಟೆಯ ನಿರ್ಮಾಣ ಕಾರ್ಯಕ್ಕಾಗಿ ತಕ್ಷಣವೇ ಆಜ್ಞೆ ಮಾಡುತ್ತಾನೆ. ಅದೇ ಸಮಯಲ್ಲಿ ನರಸಿಂಹಪುರದಲ್ಲಿ ದೇಶಪಾಂಡೆ ಮನೆತನದ ಉಮಾಪತಿಪಂಡಿತನೆಂಬ ಭಕ್ತನು ಆ ಸ್ಥಳದಲ್ಲಿ ಉಪಾಸನಾನಿರತನಾಗಿರುತ್ತಾನೆ. ಪವಿತ್ರ ತೀರ್ಥ ಕ್ಷೇತ್ರದಲ್ಲಿ ದಂಡೆಯ ಮೇಲೆ ಕೋಟೆ ನಿರ್ಮಾಣಗೊಂಡಲ್ಲಿ ಅದರ ಪಾವಿತ್ರ್ಯವು ನಷ್ಟವಾಗಬಹುದಲ್ಲ ಎಂಬ ಕೊರಗು ಅತನಿಗೆ ಆರಂಭವಾಗುತ್ತದೆ. ಆಗ ಒಂದು ದಿನ ಇದ್ದಕ್ಕಿದ್ದಂತೆ ಬಾದಶಹನಿಗೆ ವಿಪರೀತ ಉದರಶೂಲೆಯು ಆರಂಭವಾಯಿತಂತೆ. ಆಗ ಪ್ರಧಾನ ವಜೀರರು ಬಂದು ಆ ಸ್ಥಳಮಹಾತ್ಮವನ್ನು ವಿವರಿಸಿದಾಗ ಬಾದಶಹನು ಕೋಟೆ ಕಟ್ಟಿಸುವುದನ್ನು ನಿಲ್ಲಿಸಿದನಂತೆ. ನರಸಿಂಹನ ತೀರ್ಥಪ್ರಸಾದ ಸ್ವೀಕರಿಸಿದ ನಂತರ ಆತನ ರೋಗವು ಗುಣವಾಯಿತಂತೆ. ಇದರಿಂದ ಪ್ರಭಾವಿತನಾದ ಆದಿಲ್‌ಶಹನು ದೇವನ ಹೆಸರಿನಿಂದ ಅನೇಕ ಗ್ರಾಮಗಳನ್ನು ದಾನ ಮಾಡಿದನೆಂದೂ, ದೇವಾಲಯದ ನೌಕರ ವರ್ಗದವರಿಗೆ ಭೂಮಿಗಳನ್ನು ಇನಾಮಾಗಿ ಕೊಟ್ಟನೆಂದೂ ಇಂದಿಗೂ ಆ ಚಾಕರ ವರ್ಗದವರು ಆ ಭೂಮಿಯ ಒಡೆತನವನ್ನು ಹೊಂದಿರುವರೆಂದೂ "ಶ್ರೀಕ್ಷೇತ್ರ ನರಸಿಂಹಪುರ" ಎಂಬ ಗ್ರಂಥವನ್ನು ಬರೆದು ಮುದ್ರಿಸಿದ ಶ್ರೀ ಗೋಹ ದಂಡವತೆ ಇವರು ತಿಳಿಸುತ್ತಾರೆ.

ಅಲಿ ಆದಿಲ್‌ಶಹನು ಈ ಕ್ಷೇತ್ರಕ್ಕೆ ಬಂದು ಹೋದಂದಿನಿಂದ ಭಕ್ತರು ಸಾಕಷ್ಟು ಪ್ರಮಾಣದಲ್ಲಿ ಈ ಕ್ಷೇತ್ರಕ್ಕೆ ಬರತೊಡಗಿದರು. ನರಸಿಂಹಪುರದ ಎರಡೂ ಬದಿಯಲ್ಲಿ ಭೀಮಾ ಹಾಗೂ ನೀರಾ ನದಿಗಳು ಹರಿಯುವುದುಂಟು. ಬಹು ರಮಣೀಯವಾದ ದೃಶ್ಯದಿಂದ ಕೂಡಿದ ಈ ಪ್ರದೇಶವು ಎಂಥವರ ಮನವನ್ನೂ ತನ್ನತ್ತ ಆಕರ್ಷಿಸುವುದುಂಟು. ಈ

ಸದಿಗಳ ದಂಡೆಗುಂಟ ಅನೇಕ ಸ್ನಾನ ಘಟ್ಟಗಳನ್ನು ನಿರ್ಮಿಸಿದದಾನಿಗಳ ಶಿಲಾಲೇಖಗಳಿವೆ. ಅಲಿ ಆದಿಲ್‌ಶಹನ ಚಾಕರಿಯಲ್ಲಿದ್ದ ಮುಧೋಜಿ ಹಾಗೂ ನಳದುರ್ಗದ ದೇಶಮುಖರಿಂದಲೂ ಸ್ನಾನಘಟ್ಟಗಳು ನಿರ್ಮಾಣಗೊಂಡಿವೆ. ಕ್ರಿ.ಶ. ೧೬೦೫ ವಿಶ್ವಾವಸು ನಾಮ ಸಂವತ್ಸರ ಮಾಘ ಶುದ್ಧ ಏಕಾದಶಿಯ ದಿನ ಈ ಸ್ನಾನಘಟ್ಟವನ್ನು ನಿರ್ಮಿಸಲಾಯಿತೆಂದು ಆ ಶಿಲಾಲೇಖಗಳಿಂದ ತಿಳಿದುಬರುತ್ತದೆ. ಮುಧೋಜಿ ಸೋದರರು ಹದಿನಾರು ಕಂಬಗಳಿಂದ ಕೂಡಿದ ದೇವಾಲಯವನ್ನು ನಿರ್ಮಿಸಿದರು. ಮುಧೋಜಿ ಕ್ರಿ.ಶ. ೧೬೦೯ ರವರೆಗೆ ಜೀವಿತನಾಗಿದ್ದನೆಂದು ತಿಳಿದು ಬರುವುದು. ಇಲ್ಲಿ ಅಶ್ವತ್ಥ ರೂಪಿ ನರಸಿಂಹನ ಪೂಜೆಯೂ ಇದೆ. ದೇವಾಲಯದ ಹಿಂಭಾಗದಲ್ಲಿರುವ ಅತ್ಯಂತ ಹಳೆಯದಾದ ವಟವೃಕ್ಷವನ್ನು ಅಕ್ಷಯವಟವೆಂದು ಪೂಜಿಸುತ್ತಾರೆ.

ಈ ಕ್ಷೇತ್ರದಲ್ಲಿ ಸೇವೆಗೈದ ಅನೇಕ ಪ್ರಮುಖರ ಹೆಸರುಗಳನ್ನು ಸಹ ನಾವು ಕಾಣಬಹುದು. ಕುಲಕರ್ಣಿ, ಜೀನಸೀವಾರೆ, ಗಂಗಾಖೇಡಕರ, ಬಾಬಾ ಬಾವಡೇಕರ - ಹೀಗೆ ಅನೇಕ ಮಹನೀಯರು ದೇವನ ಸೇವೆಗೈದ ವಿಚಾರವಾಗಿ ಶಿಲಾಲೇಖಗಳನ್ನು ನಾವು ನೋಡಬಹುದಾಗಿದೆ. ಗ್ರಂಥಕಾರರಾದ ಶ್ರೀ ದಂಡವತೆಯವರು ಇಲ್ಲಿರುವ ನರಸಿಂಹ ಮೂರ್ತಿಯನ್ನು ಆದ್ಯಶಂಕರಾಚಾರ್ಯರು ಪ್ರತಿಷ್ಠಾಪನೆ ಮಾಡಿದರೆಂದು ಹೇಳಿ ಅವರಿಂದ ರಚಿತವಾದ ನರಸಿಂಹ ಸ್ತುತಿಯ ಉಲ್ಲೇಖವನ್ನು ಮಾಡುತ್ತಾರೆ.

ಛತ್ರಪತಿ ಶಿವಾಜಿ ಮಹಾರಾಜರ ಗುರುಗಳಾಗಿದ್ದ ಸಮರ್ಥ ರಾಮದಾಸರು ತಮ್ಮ ಪ್ರವಾಸಕಾಲದಲ್ಲಿ ಕ್ರಿ. ಶ. ೧೬೪೧ ರ ಸುಮಾರಿನಲ್ಲಿ ಈ ನೀರಾ ನರಸಿಂಹ ಕ್ಷೇತ್ರಕ್ಕೆ ಬಂದು ಹೋದರೆಂದು ಅವರು ರಚಿಸಿದ ಒಂದು ಪದ್ಯದಿಂದಲೇ ತಿಳಿದು ಬರುತ್ತದೆ.

ಮಹಾಭಕ್ತ ಪ್ರಹ್ಲಾದ ಕಷ್ಟವಿಲಾ
ಹ್ಮಣೋನಿ ತಯಾಕಾರಣೆ ಸಿಂಹಯಾಲಾ
ಮಹಾಭಕ್ತ ಪ್ರಹ್ಲಾದ ಹಾದೈತ್ಯಕುಳಿ
ಪಿತಾಪಾಪರೂಪಿ ತಯಾ ದೇಖಿವೇನಾ
ಜನೀ ದೈತ್ಯ ತೋ ರಾಮ ಮುಖೀಹ್ಮಣೇನಾ

ಅಲ್ಲದೆ ಶ್ರೀ ರಾಮದಾಸ ಪ್ರಭುಗಳು ಈ ದೇವನ ಅರ್ಚನೆಯಕಾಲದಲ್ಲಿ ಹೇಳಿದ ಒಂದು ಪದ್ಯವು ಇದೆ.

ಚರಚರ ಫಾಡೀ ವಿಭಾಂಡಿ
ತರತರ ಅಂತ್ರಮಾಳಾಜಧೋನೀ ಕಾಠಿ
ಭರಭರ ಆವೇಶ ಪೋಟೀ ಕ್ರೋಧ ಭಡಾಡಿ
ಬ್ರಹ್ಮಪ್ರಲಯ ಜೈಸಾಪಾವಕ ಧಡಾಡಿ

ಈ ಪದ್ಯದಿಂದ ಸಮರ್ಥರು ಹಿರಣ್ಯಕಶ್ಯಪನ ಕೋಪ ಹಾಗೂ ಸಂಹಾರವಾದುದನ್ನು ವರ್ಣಿಸಿದ್ದಾರೆ.

ಶ್ರೀ ಸಮರ್ಥರು ಕೊನೆಯ ಪಕ್ಷ ಎರಡು ಸಲವಾದರೂ ಈ ಕ್ಷೇತ್ರಕ್ಕೆ ಬಂದು ಹೋಗಿರಬಹುದು. ಕ್ರಿ.ಶ. ೧೬೩೧ ರ ಸ್ಪಷ್ಟ ಉಲ್ಲೇಖವು ದೊರೆಯುತ್ತದೆ. ಅವರು ಈ ಕ್ಷೇತ್ರದಲ್ಲಿದ್ದಾಗ ನಡೆದ ಸಂಗತಿಯೊಂದನ್ನು ಹೇಳುತ್ತಾರೆ.

ಸಮರ್ಥರು ನೀರಾ - ಭೀಮಾ ಸಂಗಮ ಸ್ಥಾನದಲ್ಲಿ ತಮ್ಮ ನಿತ್ಯವಿಧಿಗಳನ್ನು ಮುಗಿಸಿಕೊಂಡು ಪಾಲಿಯ ಕಡೆಗೆ ಪ್ರಯಾಣಸನ್ನದ್ಧರಾಗಿದ್ದರು. ಪ್ರತಿದಿನ ಅವರು ಭಿಕ್ಷಾಟನೆಯಿಂದ ತಂದ ಅನ್ನವನ್ನು ತೀರ್ಥಪ್ರೋಕ್ಷಣೆ ಮಾಡಿ ಅದರಲ್ಲಿ ಒಂದು ಭಾಗ ದೇವನಿಗಾಗಿಯೂ ಇನ್ನೊಂದನ್ನು ಹಸುವಿಗೂ ಮೂರನೇ ಭಾಗವನ್ನು ಜಲಚರ ಪ್ರಾಣಿಗಳಿಗೂ ನಾಲ್ಕನೆಯ ಭಾಗವನ್ನು ತಮ್ಮೊಂದಿಗಿದ್ದ ಶಿಷ್ಯರೊಂದಿಗೆ ಭೋಜನ ಮಾಡುತ್ತಿದ್ದರು. ಒಂದು ದಿನ ವೃದ್ಧ ಬ್ರಾಹ್ಮಣ ಹಸಿದಿರುವುದನ್ನು ಕಂಡಾಗ ಅತಿಥಿದೇವೋ ಭವ ಎಂದು ತಮ್ಮ ಅನ್ನವನ್ನು ಆತನಿಗೆ ಕೊಟ್ಟರಂತೆ. ಭೋಜನಾನಂತರ ಮುಖಶುದ್ಧಿಗಾಗಿ ತುಲಸೀದಲವನ್ನಿತ್ತರಂತೆ. ಹೊಟ್ಟೆ ತುಂಬ ಭೋಜನ ಮಾಡಿದ ಆ ವೃದ್ಧ ಬ್ರಾಹ್ಮಣನು ಅಲ್ಲಿಯೇ ವಿಶ್ರಾಂತಿಗಾಗಿ ಮಲಗಿದನಂತೆ. ಸಮರ್ಥರು ತಮ್ಮ ಪ್ರಯಾಣದ ಸಿದ್ಧತೆಯಲ್ಲಿ ನಿರತರಾದಾಗ ಆ ವೃದ್ಧ ಬ್ರಾಹ್ಮಣನು ಇಷ್ಟೇಕೆ ಅವಸರ ಇಂದು ನರಸಿಂಹ ದೇವಾಲಯದಲ್ಲಿ ನಿಮ್ಮ ಕೀರ್ತನವಾಗಲಿ ಎಂದನಂತೆ. ಅದನ್ನು ಕೇಳುವ ಅಪೇಕ್ಷೆಯು ನಮಗಿದೆ ಎಂದು ಹೇಳಿ ಆ ವೃದ್ಧನು ಹೊರಟು ಹೋದನಂತೆ. ಸಾಯಂ ಸಂಧ್ಯಾ ಮುಗಿದ ನಂತರ ಮಾರುತಿಗೆ ವಂದಿಸಿ ನರಸಿಂಹ ದೇವಾಲಯದಲ್ಲಿ ಸಮರ್ಥರು ಕೀರ್ತನಕ್ಕಾಗಿ ಸಿದ್ಧರಾದರು. ಕಣ್ಮುಚ್ಚಿಕೊಂಡು ತದೇಕ ಚಿತ್ತದಿಂದ ಧ್ಯಾನಾಸಕ್ತರಾದರು. ಶ್ರೋತೃಗಳ ಗುಂಪಿನಲ್ಲಿ, ಮಧ್ಯಾಹ್ನ ಕಂಡ ವೃದ್ಧನು ಎಲ್ಲಿಯಾದರೂ ಕಾಣಬಹುತ್ತಾನೆಯೋ ಎಂದು ನೋಡಿದರು. ಆಗ ಇದ್ದಕ್ಕಿದ್ದಂತೆ ಅವರ ಮುಖದಿಂದ--

ಉಭಾಸಿಂಹಾಸನಿ ತೋಚಿದ್ವಿಜ
ವಿಕಾಸಲೆ ಆಸೆಮುಖಾಂಭುಜ

ಎಂದು ಹೇಳುವಾಗ ಧಾರಾಕಾರವಾಗಿ ನೇತ್ರಗಳು ತುಂಬಿ ಬಂದವು.

ಆದಿಲ್‌ಶಾಹೀ ರಾಜ್ಯದಿಂದ ಈ ದೇವನಿಗೆ ಕೊಡಲ್ಪಟ್ಟ ಜಮೀನುಗಳನ್ನೆಲ್ಲ ಯಥಾರೀತಿಯಲ್ಲಿ ಮರಾಠರು ಹಿಂದಿನಂತೆ ಮುಂದುವರಿಸಿಕೊಂಡು ಬಂದಿದ್ದಾರೆ. ಔರಂಗಜೇಬನು ನೀರಾ ನರಸಿಂಹ ಕ್ಷೇತ್ರದ ಹತ್ತು ಮೈಲಿನ ಅಂತರದಲ್ಲಿರುವ ಅಕಲೂಜ ಎಂಬಲ್ಲಿ ತನ್ನ ಛಾವಣಿಯನ್ನು ಹಾಕಿದ್ದನೆಂದು ತಿಳಿದುಬರುತ್ತದೆ. ಆಗ ನರಸಿಂಹಪುರ ನಿವಾಸಿಗಳು ಈ ದೇವನನ್ನು ಗುಪ್ತ ರೀತಿಯಿಂದ ರಕ್ಷಿಸಿಕೊಂಡು ಬಂದರೆಂದು ತಿಳಿದುಬರುತ್ತದೆ.

ನೀರಾ ನರಸಿಂಹ ಕ್ಷೇತ್ರವು ಕರ್ನಾಟಕ ಹಾಗೂ ಮಹಾರಾಷ್ಟ್ರದ ನರಸಿಂಹ ಭಕ್ತರಿಗೆಲ್ಲ ಮಹಾ ಪುಣ್ಯಸ್ಥಳವೆನಿಸಿಕೊಂಡಿದೆ. ಸಾವಿರಾರು ಸಂಖ್ಯೆಯಲ್ಲಿ ಭಕ್ತರು ಈ ಕ್ಷೇತ್ರಕ್ಕೆ ಬಂದು ಹೋಗುತ್ತಾರೆ. *

# ಸಿಂಹಾಚಲ ಕ್ಷೇತ್ರ

---ಸಿ. ಗೋವಿಂದಾಚಾರ್.

ನೃಸಿಂಹಕ್ಷೇತ್ರಗಳ ಪ್ರಾಮುಖ್ಯತೆಯಲ್ಲಿ ಕರ್ಣಾಟಕದ ನಂತರ ಆಂಧ್ರಪ್ರದೇಶ ಎರಡನೆಯ ಸ್ಥಾನದಲ್ಲಿದೆ. ಮೇರು ಕ್ಷೇತ್ರವಾದ ಅಹೋಬಿಲದ ಸಂಬಂಧಿಯಂತೆ ಮತ್ತೊಂದು ಕ್ಷೇತ್ರ ವಿಶಾಖಪಟ್ಟಣದ ಸಮೀಪವಿರುವ ಸಿಂಹಾಚಲಕ್ಷೇತ್ರ. ಪರ್ವತವು ಒಂದು ಕಡೆ ನೋಡಿದರೆ ಸಿಂಹದ ಮುಖದಂತೆ ಗೋಚರವಾಗುವುದರಿಂದ ಈ ಹೆಸರು. ಕ್ಷೇತ್ರವು ಸಮುದ್ರಮಟ್ಟಕ್ಕಿಂತ ೫೦೦ ಅಡಿಗಳಷ್ಟು ಎತ್ತರವಾಗಿದೆ. ಐತಿಹಾಸಿಕ ಹಾಗೂ ಮಿಲಿಟರಿ ದೃಷ್ಟಿಯಿಂದ ಇದು ಒಂದು ಪ್ರಮುಖ ಸ್ಥಾನ. ಬೆಟ್ಟವೆಲ್ಲಾ ಅರಣ್ಯಮಯವಾಗಿದೆ. ಬೆಟ್ಟದ ತಪ್ಪಲನ್ನು ಆದಿವರಂ ಎಂದು ಕರೆಯುವರು. ವರಾಹನೃಸಿಂಹಸ್ವಾಮಿ ಸನ್ನಿಧಿ ತಲಪಲು ಇಲ್ಲಿಂದ ಸುಮಾರು ೧೦೦೦ ಮೆಟ್ಟಿಲುಗಳನ್ನು ಹತ್ತಿಹೋಗಬೇಕು. ವೇಣುಗೋಪಾಲಸ್ವಾಮಿ, ಸೀತಾರಾಮ, ಹನುಮಂತ, ಕಾಶಿ ವಿಶ್ವನಾಥ ತ್ರಿಪುರಾಂತಕ, ತ್ರಿಪುರಸುಂದರಿ ಈ ಕ್ಷೇತ್ರದಲ್ಲಿರುವ ಇತರ ದೇವಸ್ಥಾನಗಳು. ಮಾಧವಧಾರ, ಸಿಂಹಾಚಲದಾರ, ಸೀತಮಧಾರ ಎಂಬ ಚಿಲುಮೆಗಳಿವೆ. ೧೧೦ ಅಡಿ ಎತ್ತರದ 'ಗಾಳಿಗೋಪುರ' ರಾಜಗೋಪುರವು ಪಶ್ಚಿಮಾಭಿಮುಖವಾಗಿದೆ. ದಕ್ಷಿಣ - ಮಧ್ಯ ಭಾರತದ ಕೊನೆಯ ನೃಸಿಂಹಕ್ಷೇತ್ರವಾಗಿದೆ.

## ಸ್ಥಳಪುರಾಣ :

ನೃಸಿಂಹಾವತಾರಕ್ಕೂ ಈ ಕ್ಷೇತ್ರಕ್ಕೂ ನಂಟಿದೆ. 'ಸಿಂಹಾಚಲ ಮಹಾತ್ಮೆ' ಪ್ರಕಾರ, ಹಿರಣ್ಯನು ಪ್ರಹ್ಲಾದನನ್ನು ಬೆಟ್ಟದ ಮೇಲಿಂದ ಕೆಳಗೆ ತಳ್ಳಿಸಿದಾಗ, ಮಹಾವಿಷ್ಣುವು ಪ್ರಹ್ಲಾದನನ್ನು ರಕ್ಷಿಸಿದ ಸ್ಥಳವೇ ಸಿಂಹಾಚಲ. ಭಗವಂತನ ಕೃಪೆಗೆ ಪಾತ್ರನಾದ ಪ್ರಹ್ಲಾದನು ದೀರ್ಘಕಾಲ ತಪಸ್ಸುಮಾಡಿ ವರಾಹನೃಸಿಂಹರೂಪವನ್ನು ನೋಡಲು ಪ್ರಾರ್ಥಿಸಿದನು. ಅವನ ಅಭೀಷ್ಟದಂತೆ ಭಗವಂತನು ವರಾಹ ನೃಸಿಂಹ ರೂಪದಲ್ಲಿ ಮೈದೋರಿದ. ಪ್ರಹ್ಲಾದನು ಒಂದು ಸನ್ನಿಧಿಯನ್ನು ನಿರ್ಮಿಸಿದ. ಇವನ ನಂತರ ಈ ಸನ್ನಿಧಿ ಅನೇಕ ಶತಮಾನಗಳವರೆಗೆ ಅಗೋಚರವಾಗಿ ಪಾಳುಬಿದ್ದಂತೆ ಇತ್ತು. ಒಮ್ಮೆ ಚಂದ್ರವಂಶೀಯರಾಜ ಪುರೂರವ ಹಾಗೂ ಅವನ ರಾಣಿ ಊರ್ವಶಿ ವಿಹಾರಕ್ಕಾಗಿ ಸಂಚರಿಸುತ್ತಿದ್ದಾಗ "ಪುರೂರವ ನಾನು ಇಲ್ಲಿ ಸಹಸ್ರಾರು ವರ್ಷಗಳಿಂದ ಅಗೋಚರವಾಗಿದ್ದೇನೆ. ನೀನು ನನ್ನನ್ನು ಪುನಃ ಪ್ರತಿಷ್ಠಾಪಿಸು. ಭಕ್ತರಿಗಾಗಿ ಒಂದು ವರ್ಷದಲ್ಲಿ ಒಂದು ದಿವಸ ಮಾತ್ರ ನನ್ನ ನಿಜಸ್ವರೂಪ ಗೋಚರವಾಗಲಿ. ಇನ್ನು ಮಿಕ್ಕದಿನಗಳಲ್ಲಿ ಚಂದನದ ಹೊದ್ದಿಕೆಯ ರೂಪದಲ್ಲಿ ನಾನು ನಿತ್ಯರೂಪಿಯಾಗಿರುತ್ತೇನೆ" ಎಂದು ಆಕಾಶವಾಣಿ ಮೊಳಗಿತು. ಆನಂದಭರಿತನಾದ ರಾಜನು ಭಗವದಾಜ್ಞೆಯನ್ನು ಶಿರಸಾವಹಿಸಿ ಪಾಲಿಸಿದನು. ಇವನ ನಂತರ ಶ್ವೇತಮುಖಿ ಎಂಬ ರಾಜನು ಕೈಂಕರ್ಯವನ್ನು ಮುಂದುವರೆಸಿದ. ಅಹೋಬಿಲ ನೃಸಿಂಹನ ಉಗ್ರರೂಪವನ್ನು ದೇವತೆಗಳು ನೋಡಲಾಗದೆ ಶಾಂತರೂಪವನ್ನು ಪ್ರಾರ್ಥಿಸಲು 'ಸಿಂಹಾಚಲದಲ್ಲಿ ನಿಮ್ಮ ಕೋರಿಕೆಯನ್ನು ಈಡೇರಿಸುವೆನು' ಎಂದು ಭಗವಂತನು ಅಭಯವನ್ನಿತ್ತನು. ಅಂತೆಯೇ ಅಹೋಬಿಲದ ಉಗ್ರನೃಸಿಂಹನೇ ಇಲ್ಲಿ ಶಾಂತಮೂರ್ತಿಯಾಗಿ ಪ್ರಕಟಗೊಂಡನು. ಆ ಶಾಂತಮೂರ್ತಿಯ ರೂಪವೇ ಇಲ್ಲಿ ನೋಡಲು ಅಸಾಧ್ಯವಾಗಿತ್ತು ಎಂದು ಸ್ಥಳಪುರಾಣ ತಿಳಿಸುವುದು. ಪ್ರಹ್ಲಾದನನ್ನು ರಕ್ಷಿಸಲು ಭಗವಂತನು ಇಲ್ಲಿಗೆ ಇಳಿದು ಬಂದದ್ದರಿಂದ ಇಡಿ ಪರ್ವತವೇ ಮಹಾಮಹಿಮೆ ಉಳ್ಳದ್ದು ಎಂದು ಐತಿಹ್ಯವಿದೆ.

## ಇತಿಹಾಸ :

ಈ ಕ್ಷೇತ್ರದ ಇತಿಹಾಸವನ್ನು ಮೂರು ಭಾಗಗಳಾಗಿ ವಿಂಗಡಿಸಬಹುದು.



ಅ) ೬ನೇ ಶತಮಾನದ ಬಾದಾಮಿಚಾಲುಕ್ಯರಿಂದ ೧೧ನೇ ಶತಮಾನದ ಚೋಳರ ಕಾಲದವರೆಗೆ.

ಆ) ೧೧ ನೇ ಶತಮಾನದಿಂದ ಚಾಲುಕ್ಯ - ಚೋಳ, ಗಂಗ - ಚೋಳ ಮೈತ್ರಿ ಗಜಪತಿ ವಂಶದ ವರೆಗೆ.

ಇ) ಪಶುಪತಿ ವಂಶಜರಾದ ವಿಜಯನಗರಂ ಜಮಿನ್ದಾರರ ಕಾಲದಿಂದ ೨೦ ನೇ ಶತಮಾನದ ವರೆಗೆ.

ಮೊದಲನೆಯ ಭಾಗದಲ್ಲಿ ಯಾವ ಒಂದು ರಾಜರ ಆಳ್ವಿಕೆಯೂ ಶಾಶ್ವತವಾಗಿರದೆ ಕ್ಷೇತ್ರವು ಸಮರಮಯವಾಯಿತು. ಎರಡನೆಯ ಭಾಗದಲ್ಲಿ ಕ್ಷೇತ್ರದ ಅಭಿವೃದ್ಧಿಯನ್ನು ಕಾಣಬಹುದು. ಉಭಯಪಕ್ಷಗಳಲ್ಲಿ ಮೈತ್ರಿ ಉಂಟಾಗಿ ರಕ್ತಸಂಬಂಧ ಬೆಳೆಯಿತು. ಪೂರಿ ಜಗನ್ನಾಥ ಕ್ಷೇತ್ರದ ಕರ್ತೃವಾದ ಅನಂತ ವರ್ಮ ಚೋಡಗಂಗ ಹಾಗೂ ಇವನ ಮಗ ಅನಂಗ ಭೀಮದೇವರಕಾಲದಲ್ಲಿ ಕ್ಷೇತ್ರ ಚೆನ್ನಾಗಿ ಅಭಿವೃದ್ಧಿ ಹೊಂದಿತು. ಕ್ಷೇತ್ರವನ್ನು ಇವರು 'ಸಿಂಹಂದ್ರಿ' ಎಂದು ಕರೆಯುತ್ತಿದ್ದರು. ಇವರ ಕೇಂದ್ರ ಸ್ಥಾನ ಕುಲೋತ್ತುಂಗ ಚೋಳ ಪಟ್ಟಣಂ (ಇಂದಿನ ವಿಶಾಖ ಪಟ್ಟಣ) ಇವರಿಂದ ದೇವಸ್ಥಾನಕ್ಕೆ ಬಂದ ಬಳುವಳಿಯನ್ನು ಕುರಿತು ದೇವಸ್ಥಾನದ ಶಾಸನ ಒಂದು (೧೧೮೭) ತಿಳಿಸುವುದು. ಕ್ರಮೇಣ ಒಂದನೆ ನೃಸಿಂಹದೇವನ ಕಾಲಕ್ಕೆ (೧೨೩೭-೬೩) ಕ್ಷೇತ್ರವು ಪ್ರಥಮವಾಗಿ ಧಾಳಿಯನ್ನು ಎದುರಿಸಬೇಕಾಯಿತು. ಮತ್ತ್ನ ರಾಜರ ನೆರವಿನಿಂದ ಕ್ಷೇತ್ರವು ಯಥಾಸ್ಥಿತಿಗೆ ಬಂತು. ಪ್ರಥಮ ಜೀರ್ಣೋದ್ಧಾರ ಕಾರ್ಯ ನಡೆಯಿತು. ತಮಗೆ ವಿಜಯ ಪ್ರಾಪ್ತವಾಗಿದ್ದೂ ಹಾಗೂ ಸಮರಗಳು ಸಂಪೂರ್ಣವಾಗಿ ನಿಂತು ಉಭಯ ಪಕ್ಷಗಳ ನಡುವೆ ಮೈತ್ರಿಯುಂಟಾಗಿ ರಕ್ತಸಂಬಂಧ ಬೆಳೆದದ್ದು ಭಗವಂತನ ಕೃಪೆ ಎಂದು ಭಾವಿಸಿ ಮತ್ಸ್ನ ರಾಜರು ಸಿಂಹಾಚಲನಾಥನನ್ನು ಕುಲದೈವವನ್ನಾಗಿ ಮಾಡಿಕೊಂಡರು. ಇವರ ಪೈಕಿ 'ಸಿಂಹಾಚಲನಾಥ ದಿವ್ಯಪಾದುಕಾಸೇವಕ' ಎಂದು ಬಿರುದಾಂಕಿತನಾದ ಅರ್ಜುನದೇವ ಮೊದಲನೆಯವನು. ಇವರಿಗೂ ಸುರಭಿ ವಂಶರಾಜರಿಗೂ ಮೈತ್ರಿ ಬೆಳೆದು ಕ್ಷೇತ್ರವನ್ನು ಚೆನ್ನಾಗಿ ಆಳಿದರು. ದೇವರು ತಂದೆಯ ಸ್ಥಾನದಲ್ಲಿದ್ದು ಎಲ್ಲರನ್ನೂ ಪೋಷಿಸುವನು ಎಂದು ಭಾವಿಸಿ ವರಾಹ ನೃಸಿಂಹಸ್ವಾಮಿಯನ್ನು ಸಿಂಹಾದ್ರಿ ಅಪ್ಪ, ಅಪ್ಪಣ್ಣ, ಸಿಂಹಲು ಎಂದು ಆತ್ಮೀಯವಾಗಿ ಕಾಣುತ್ತಿದ್ದರು. ಈಗಲೂ ಭಕ್ತರು ಈ ದಿವ್ಯನಾಮಗಳನ್ನೇ ಬಳಸುವರು. ೧೩ನೇ ಶತಮಾನದ ಕೊನೆಗೆ ಹಲವಾರು ದಶಕಗಳು ರಾಜಮಂಡ್ರಿಯ ರೆಡ್ಡಿವಂಶಜರು ಕ್ಷೇತ್ರವನ್ನು ಆಳಿದರು. ೧೪ ನೇ ಶತಮಾನದಲ್ಲಿ ಸೂರ್ಯವಂಶಿ ಗಜಪತಿ ವಂಶಜರಾದ ಕಪಿಲೇಂದ್ರ ದೇವ, ಪ್ರತಾಪರುದ್ರದೇವರ ಆಳ್ವಿಕೆಯಲ್ಲಿ ದೇವಸ್ಥಾನಕ್ಕೆ ದಿವ್ಯಾಭರಣಗಳ ರಾಶಿಯೇ ಪ್ರಾಪ್ತವಾಯಿತು. ಈ ವಿಷಯ ದೇವಸ್ಥಾನದ ಶಾಸನ ಒಂದರಲ್ಲಿ (೧೪೪೩) ಉಕ್ತವಾಗಿದೆ. ೧೫೧೬ ರಲ್ಲಿ ಶ್ರೀಕೃಷ್ಣದೇವರಾಯನು ಗಜಪತಿಯನ್ನು ಸೋಲಿಸಿ, ತನ್ನ ವಿಜಯಕ್ಕೆದೇವರ ಕೃಪೆಯೇ ಕಾರಣ ಎಂದು ಭಾವಿಸಿದ. ಸಿಂಹಾದ್ರಿನಾಥನನ್ನು 'ಡಿಂಭಕೇಸರಿ' ಎಂದು ಹೊಗಳಿದ. ಉಡುಗೊರೆಗಳ ಸುರಿಮಳೆ ಆಯಿತು. ಪ್ರಥಮಬಾರಿಗೆ ಗೋಲ್ಕೊಂಡಾ ದೊರೆಗಳು ಕ್ಷೇತ್ರಕ್ಕೆ ನುಗ್ಗಿ ಧಾಳಿ ಮಾಡಿದರು. ರಾಜಾ ಮುಕುಂದದೇವರಾಯನ (ಅಹೋಬಿಲ ಮಠದ ಉಗಮಕ್ಕೆ ಮೂಲಕಾರಣನು) ನೆರವಿನಿಂದ ಹಾಗೂ ದೇವಸ್ಥಾನದಲ್ಲಿದ್ದ ಜೇನು ಹುಳುಗಳ ಕಾಟದಿಂದ ಕುಲಿಕುತುಬ್ ಷಾ ವಾಲ್ಟೇರ್ ವರೆಗೆ ಪಲಾಯನ ಮಾಡಿದ. ಸಕಾಲಕ್ಕೆಒದಗಿ ಬಂದ ಭಗವಂತನ ಕೃಪೆಯನ್ನು ಸಾಮಂತರು ಕೊಂಡಾಡಿ ಪ್ರಥಮ ಬಾರಿಗೆ ದೇವಸ್ಥಾನದ ಹೆಸರಿನಲ್ಲಿ ಭೂಮಿಯನ್ನು ಬಳುವಳಿಯಾಗಿ ಕೊಟ್ಟರು. ೧೬ ನೇ ಶತಮಾನದ ಸುಮಾರಿಗೆ ಬ್ರಿಟಿಷರು ಫ್ರೆಂಚರು ಕಾಣಿಸಿಕೊಂಡರು. ಗಜಪತಿ ವಂಶದ ಪತನವಾದ ನಂತರ ಕ್ಷೇತ್ರವು ಪಶುಪತಿ ವಂಶಜರಾದ ವಿಜಯ ನಗರಂ ಜಮೀನ್ದಾರರ ಆಳ್ವಿಕೆಗೆ ಒಳಪಟ್ಟಿತು. ಶೀಘ್ರದಲ್ಲಿಯೇ ಸರ್ವತೋಮುಖ ಬೆಳವಣಿಗೆಯ ಪಥದಲ್ಲಿ ಸಾಗಿತು. ಚಿನ್ನ ವಿಜಯರಾಮರಾಜ ಬಹದ್ದೂರ್ II ದೇವಸ್ಥಾನದ ಹೆಸರಿನಲ್ಲಿ ೧೪ ಗ್ರಾಮಗಳನ್ನು ದಾನಮಾಡಿ ಕೈಂಕರ್ಯಪರರಿಗೆ ಇನಾಮುಗಳನ್ನು ಕೊಟ್ಟನು. ಶಿಥಿಲಗೊಂಡ ಜಾಗಗಳನ್ನು ಸರಿಮಾಡಿದನು. ಹಲವಾರು ದಶಕಗಳು ಕ್ಷೇತ್ರವು ಈಸ್ಟ್ ಇಂಡಿಯಾ ಕಂಪೆನಿಯ ನಿರ್ವಹಣೆಗೆ ಒಳಪಟ್ಟಿತ್ತು. ವಿಶಾಖ ಪಟ್ಟಣದ ಕಲೆಕ್ಟರ್ ನಿಯಂತ್ರಣೆಗೆ ಒಳಪಟ್ಟಿತ್ತು. ಹೀಗೆ ಒಂದು ಕಡೆ ಕಳಿಂಗ - ಚೋಳ - ಚಾಲುಕ್ಯರು ಮತ್ತೊಂದು ಕಡೆ ಗಜಪತಿ - ಪಶುಪತಿ ವಂಶಜರು ಕ್ಷೇತ್ರದ ಏಳಿಗೆಗೆ ಬಹಳಷ್ಟು ಕಾರಣರಾಗಿದ್ದಾರೆ. ಒಟ್ಟು ೩೭ ಶಾಸನಗಳು ದೇವಸ್ಥಾನದ ವಿವಿಧ ಭಾಗಗಳಲ್ಲಿವೆ.

## ಕ್ಷೇತ್ರ ವಿವರಣೆ :

ಮೂಲ ವಿರಾಟ್ ಇರುವ ಸನ್ನಿಧಿಗೆ ಪ್ರಹ್ಲಾದ ಮಂಟಪ ಎಂದು ವಿಮಾನಕ್ಕೆ ಪ್ರಹ್ಲಾದ ವಿಮಾನ ಎಂದು ಹೆಸರು. ಸುಮಾರು ೩ ಅಡಿಗಳಷ್ಟು ಎತ್ತರದ ವರಾಹ ನೃಸಿಂಹಮೂರ್ತಿಯು ವರಾಹನಂತೆ ಮುಖ ಮಂಡಲವು ಮನುಷ್ಯನಂತೆ ದೇಹವು ಹಾಗೂ ಸಿಂಹದ ಬಾಲದಿಂದ ಕೂಡಿದ ಮೂರ್ತಿಯಾಗಿ ತ್ರಿಭಂಗಿಯಲ್ಲಿದೆ. ಕುರ್ಚೆ ಮೇಲೆ ಎರಡು ಕೈಗಳನ್ನಿಟ್ಟು ಕುಳಿತಿರುವಂತೆಯೂ ಗೋಚರವಾಗುವುದು. ಪಾದಗಳು ಗೋಚರವಾಗುವುದಿಲ್ಲ. ಕುದುರೆ ಮುಖದಂತೆಯೂ ಕಾಣುವುದು .ಎಂದು 'ವರಾಹ ಹಯಗ್ರೀವ ನೃಸಿಂಹ' ಎಂಬ ಹೆಸರೂ ಇದೆ. ಮೂಲವರ ಪಕ್ಕದಲ್ಲಿ ಶ್ರೀ ಭೂದೇವಿಯರ ಮೂರ್ತಿ ಮುಂಭಾಗದಲ್ಲಿ ಯೋಗಾನೃಸಿಂಹಮೂರ್ತಿಗಳಿವೆ. ಈ ಸ್ನಪನಮೂರ್ತಿಗೇ ನಿತ್ಯ ತಿರುಮಂಜನವಿರುವುದು. ಒಂದು ಬೆಳ್ಳಿತಟ್ಟೆ ತುಂಬ ಅಪರೂಪದ ಸಾಲಿಗ್ರಾಮಗಳಿವೆ. ಚತುರ್ಭುಜ ಸಿಂಹವಲ್ಲಿ - ವರಲಕ್ಷ್ಮಿತಾಯಾರ್ ಸನ್ನಿಧಿ ಪ್ರತ್ಯೇಕವಾಗಿದೆ. ಉತ್ಸವರು ಗೋವಿಂದರಾಜಮೂರ್ತಿ. ಲಕ್ಷ್ಮೀನಾರಾಯಣ, ಮದನಗೋಪಾಲ, ಆಂಡಾಳ್, ಷೋಡಶಾಯುಧ ಸುದರ್ಶನಮೂರ್ತಿಗಳು ಭೋಗಮಂಟಪದಲ್ಲಿವೆ. ಇದರ ಪಕ್ಕದಲ್ಲೇ ವಿಶ್ವಕ್ಸೇನ, ಆಳ್ವಾರುಗಳು ರಾಮಾನುಜ ಕೂರೇಶರ ಸನ್ನಿಧಿಗಳಿವೆ.

ಸನ್ನಿಧಿಯ ಮುಖ ಮಂಟಪದ ಮುಂದೆ 'ಕಪ್ಪ ಸ್ತಂಭ' ಎಂಬ ಅಪರೂಪದ ಕಂಭವಿದೆ. ನೆಟ್ಟಿಮನಸ್ಸಿನ ಭಕ್ತಿಯಿಂದ ಈ ಕಂಭವನ್ನು ಅಪ್ಪಿಕೊಂಡವರ ಅಭೀಷ್ಟಗಳು ಈಡೇರುವುದು ಎಂಬ ನಂಬಿಕೆ ಇದೆ. ಸಂತಾನ ಹೀನರಿಗೆ ಇದು ಸಂತಾನಗೋಪಾಲಯಂತ್ರ ಎಂದು ಪ್ರತೀತಿ ಇದೆ. ಸ್ವಾಮಿ ಪುಷ್ಕರಿಣಿ ಹಾಗೂ ವರಾಹ ಪುಷ್ಕರಿಣಿಯಿಂದ ದೈನಂದಿನ ಕಲಾಪಗಳಿಗೆ ತೀರ್ಥ ಒದಗುವುದು. ಮೂಲವರಿಗೆ ಸದಾ ಸಾಲಿಗ್ರಾಮದ ಹಾರವಿರುವುದು. ರಾಜರುಗಳಿಂದ ಬಳುವಳಿಯಾಗಿ ಬಂದ ದಿವ್ಯಾಭರಣಗಳು ದೇವಸ್ಥಾನದ ಶ್ರೀ ಭಂಡಾರದಲ್ಲಿರುತ್ತವೆ.

ಪ್ರಾತಃಕಾಲ ೫.೩೦ ಕ್ಕೆ ವಾಯುಮಂತ್ರೋಚ್ಚಾರಣೆಯೊಂದಿಗೆ, ನಂತರ ಸುಪ್ರಭಾತ ವಾದ್ಯಸಂಗೀತದೊಂದಿಗೆ ಆರಾಧನ ಆರಂಭವಾಗುವುದು. ಭಕ್ತರಿಗೆ ವಿಶ್ವರೂಪ ದರ್ಶನ ಅವಕಾಶತೀರ್ಥ ಹಾಗೂ ಬಾಲಭೋಗ (ಪುಳಿಯೋಗರೆ, ವೆಣ್ ಪೊಂಗಲ್, ದಧ್ಯೋದನ) ವಿನಿಯೋಗದೊಂದಿಗೆ ಪ್ರಾತಃಕಾಲ ಪೂಜೆ ಮುಗಿಯುವುದು. ೧೧ ಘಂಟೆಗೆ ಮಧ್ಯಾಹ್ನದ ಪೂಜೆ ಆರಂಭವಾಗಿ ರಾಜಭೋಗ (ಕದಂಬ, ಪಾಯಸ, ಮೊಸರು ಹಾಗೂ ಶರಬತ್ತು) ನಿವೇದನೆಯೊಂದಿಗೆ ಮುಕ್ತಾಯವಾಗುವುದು. ಸರ್ವದರ್ಶನ ೨ ಘಂಟೆ ಯಿಂದ ೬ ಘಂಟೆ ವರೆಗೆ (ಸಾಂದರ್ಭಿಕವಾಗಿ ಬದಲಾವಣೆ ಮಾಡಲಾಗುವುದು.) ದೀವಿಟಿಗೆ ಸಲಾಂನೊಂದಿಗೆ ಸಾಯಂಕಾಲದ ಪೂಜೆ ಆರಂಭವಾಗಿ ಮೋಸೆ ಶುಂಡಲ್ ನಿವೇದನೆ, ಶಯನ ಸೇವೆಯೊಂದಿಗೆ ಮುಕ್ತಾಯವಾಗುವುದು. ಪಾಂಚರಾತ್ರ ಆಗಮನದಲ್ಲಿ ಬರುವ ಹೆಸರಾಂತ ಸಾತ್ವತ ಸಂಹಿತೆ, ಪೌಷ್ಕರ ಸಂಹಿತೆ ಹಾಗೂ ಜಯಾಖ್ಯ ಸಂಹಿತೆಗಳ ಪ್ರಕಾರ

ಇಲ್ಲಿ ಪೂಜಾವಿಧಿಗಳು ಜರುಗುವುವು. ಇಲ್ಲಿಯ ಅರ್ಚಕರ 'ಮೂಲಪುರುಷ ತಿರುಮಲ ಪೆದ್ದಿಂಟಿ' ಮನೆತನಕ್ಕೆ ಸೇರಿದವರು. ದೇವಸ್ಥಾನದ ನಿತ್ಯ ಕಲಾಪಗಳು ಹಾಗೂ ಧಾರ್ಮಿಕ ಚಟುವಟಿಕೆಗಳಿಗಾಗಿ 'ಪರೀಕ್ಷಕರು' ಎಂಬ ಸ್ಥಾನಿಕರು ಗಂಗರಸರ ಕಾಲದಿಂದಲೂ ಸೇವೆ ಮಾಡಿಕೊಂಡು ಬಂದಿರುತ್ತಾರೆ. ಇವರ ಮುಖ್ಯಸ್ಥ 'ಭೋಗ ಪರೀಕ್ಷಕ'. ರಾಜರುಗಳಿಗೆ ಇವರು ಪುರೋಹಿತರಾಗಿದ್ದರು. ದೇವಸ್ಥಾನಕ್ಕೆ ಸೇರಿದ ಆಗಮ ಪಾಠಶಾಲೆಯಲ್ಲಿ ಗೌರವ ಅಧ್ಯಾಪಕರಾಗಿದ್ದರು. ಉಭಯ ವೇದ ಪಾರಾಯಣ, ವಿಷ್ಣು ಪುರಾಣ ಶ್ರೀಭಾಷ್ಯ ಸಹಸ್ರನಾಮ, ರಾಮಾಯಣ ಮಹಾಭಾರತದಿಂದ ಆಯ್ದ ಭಾಗಗಳ ಪಠಣ ನಿತ್ಯ ವಿಧಿಯಾಗಿರುತ್ತೆ.



## ಉತ್ಸವಗಳು :

ಎಲ್ಲಾ ಕ್ಷೇತ್ರಗಳಲ್ಲಿ ಒಂದು ಪ್ರಧಾನವಾದ ವೈಭವೋತ್ಸವವಿರುವಂತೆ ಇಲ್ಲಿ ಚಂದನೋತ್ಸವ. ಸ್ಥಳ ಪುರಾಣದ ಪ್ರಕಾರ ವೈಶಾಖ ಬಹುಳ ತೃತೀಯೆ (ಅಕ್ಷಯ ತೃತೀಯ) ಯಂದು ಮಾತ್ರ ಭಗವಂತನ ನಿಜರೂಪ ಎಲ್ಲರಿಗೂ ದರ್ಶನವಾಗುವುದು. ಮಿಕ್ಕ ದಿವಸಗಳಲ್ಲಿ ದೇವರಿಗೆ ಗಂಧದ ಲೇಪನಮಾಡಿ ರೇಷ್ಮೆವಸ್ತ್ರ ಸುತ್ತುವರು. ಈ ನಿತ್ಯರೂಪಿಯು ಲಿಂಗಾಕಾರವಾಗಿ ಕಾಣುವುದು. ಈ ದಿನ ಗಂಧ ಸಮರ್ಪಿಸುವ ಭಕ್ತನಿಗೆ ವಿಶೇಷ ಪುಣ್ಯ ಲಭ್ಯವಿದೆ ಎಂದು ಸ್ಥಳ ಪುರಾಣ ತಿಳಿಸುವುದು.

ಯಃ ಕರೋತಿ ತೃತೀಯಂ
ವಿಷ್ಣು ಚಂದನ ಭೂಷಿತಂ
ವೈಶಾಖಸ್ಯ ಸಿತೇ ಪಕ್ಷೇ
ಸಯಾಚ್ಯುತ ಮಂದಿರಮ್

ಚಂದನಮಹೋತ್ಸವದಂದು ಬ್ರಹ್ಮಾದಿಗಳು ಬಂದು ಪೂಜಿಸುವರು ಎಂಬ ಐತಿಹ್ಯವಿದೆ. ಈ ದಿವಸಬಿಟ್ಟು ಬೇರೆ ದಿವಸಗಳಲ್ಲಿ ಗಂಧಲೇಪನ ತೆಗೆದು ನಿಜರೂಪವನ್ನು ನೋಡಿದವನು ನಾಶವಾಗುವನು ಎಂದೂ ನಂಬಿಕೆ ಇದೆ. ಅಂದು ಪ್ರಾತಃಕಾಲ ೪ ಘಂಟೆಯಿಂದ ೬ ಘಂಟೆಯವರೆಗೆ ವೇದ ಘೋಷ ನಿಜರೂಪಿಗೆ ಪಂಚಾಮೃತ, ತೀರ್ಥ ಅಭಿಷೇಕ ಅರ್ಚನೆ ಹಾಗೂ ಬಾಲಭೋಗ ನಿವೇದನೆ. ಸಾಯಂಕಾಲ ೬ ಘಂಟೆಯವರೆಗೂ ನಿಜಮೂರ್ತಿಯ ದರ್ಶನವಿರುವುದು. ಸಾಯಂಕಾಲದ ಪೂಜೆ ಆರಂಭವಾಗಿ ಸಹಸ್ರ ಕಲಶಾಭಿಷೇಕವಾದ ನಂತರ ಚಂದನ ಲೇಪನ ಆರಂಭವಾಗುವುದು. ಯಾತ್ರೆಗೆ ೪ ದಿನಗಳಿಗೆ ಮುಂಚೆ ಸುಮಾರು ೧೨ ಮಣ ಗಂಧವನ್ನು ಸಿದ್ಧಪಡಿಸುವರು. ಈ ದಿನ $\frac{1}{4}$ ಭಾಗವನ್ನು ಲೇಪಿಸಿ ಮಿಕ್ಕದ್ದನ್ನು ನೃಸಿಂಹ ಜಯಂತಿ, ಆಷಾಡ ಹಾಗೂ ಜ್ಯೇಷ್ಠ ಪೌರ್ಣಮಿಯಂದು ಲೇಪಿಸುವರು.

ನೃಸಿಂಹಜಯಂತಿಯಂದು ಗಿರಿಪ್ರದಕ್ಷಿಣೆ (ಸುಮಾರು ೩೦ ಕಿ.ಮೀ) ನಂತರ ಆಸ್ಥಾನದಲ್ಲಿ ಕ್ಷೇತ್ರ ಮಹಾತ್ಮೆಯ ಕಾಲಕ್ಷೇಪವಿರುವುದು. ಕೃಷ್ಣಾಷ್ಟಮಿಯಂದು ಬಾಲ್ಯಚೇಷ್ಟಿತಗಳನ್ನು ಸೂಚಿಸುವ ಉತ್ಸವಗಳು, ಆಶ್ವಯುಜ ಕಾರ್ತೀಕಮಾಸಗಳಲ್ಲಿ ನವರಾತ್ರಿ, ಅಖಂಡ ದೀಪೋತ್ಸವಗಳು ಜರುಗುವುವು ಮಕರ ವೇಟ ಹಾಗೂ ಶಮೀಪೂಜೆಗಳನ್ನು ಆಕರ್ಷಣೀಯವಾಗಿ ಮಾಡುವರು. ಕಲ್ಯಾಣೋತ್ಸವವನ್ನು ಕಲ್ಯಾಣ ಮಂಟಪದಲ್ಲಿಯೂ ಮಿಕ್ಕ ಉತ್ಸವಗಳನ್ನು ವೈಶಾಖ - ಜ್ಯೇಷ್ಠ ಮಂಟಪಗಳಲ್ಲಿ ಮಾಡುವರು. ಚೈತ್ರ ಬಹುಳ ಏಕಾದಶಿಯಂದು 'ಗಂಗಾಧಾರ' ದಲ್ಲಿ ತೀರ್ಥವಾರಿ ಅವಭೃತಗಳು ಜರುಗುವುವು. ಚೂರ್ಣೋತ್ಸವದಂದು ದೇವರಿಗೆ ರಂಗುಗಳನ್ನು ಎರಚುವರು. ಮರದ ರಥ ಹಾಗೂ ಎಲ್ಲಾ ವಾಹನಗಳನ್ನು ವಾಹನ ಶಾಲೆಯಲ್ಲಿಡುವರು. ಉತ್ಸವಗಳನ್ನು ಬಿಜಮಾಡಿಸುವವರು ಚಂದನ ತಯಾರಿಕೆಯಲ್ಲೂ ಪಾಲ್ಗೊಳ್ಳುವರು.

## ಸಾಹಿತ್ಯ ಕಲೆ :

ನಿಜರೂಪಿಯಾದ ಭಗವನ್ಮೂರ್ತಿಯನ್ನು ಕುರಿತು ಪ್ರಥಮವಾಗಿ ಎರಡು ಸಂಸ್ಕೃತ ಲಿಪಿಗಳು ಕ್ರಮೇಣ ಒರಿಯಾ, ತೆಲುಗು, ತಮಿಳು, ಕನ್ನಡ ಲಿಪಿಗಳಿವೆ. ಕ್ಷೇತ್ರವು ಸಾಹಿತ್ಯದಲ್ಲಿ ಗೋಚರಿಸಿರುವುದು ೧೪ನೇ ಶತಮಾನದಲ್ಲಿ. ಸಿಂಹಾಚಲಕ್ಷೇತ್ರ ಮಹಾತ್ಮೆಯಲ್ಲಿ ಒಟ್ಟು ೩೨ ಅಧ್ಯಾಯಗಳಿವೆ. ಇವು ನೃಸಿಂಹಸ್ವಾಮಿಯ ೩೨ ರೂಪಗಳನ್ನು ಪ್ರತಿನಿಧಿಸುವುವು. ೧) ಕುಂದಪಾದ, ೨) ಗೋಪಸಿಂಹ, ೩) ರೌದ್ರ, ೪) ಧೂಮ್ರ, ೫) ಅಗ್ನಿ, ೬) ವ್ಯಾಘ್ರ, ೭) ಬಿಡಾಲ, ೮) ಭೀಮ, ೯) ದಿವ್ಯ ೧೦) ಬ್ರಹ್ಮಾಂಡ, ೧೧) ಸಮುದ್ರ, ೧೨) ವಿಶ್ವರೂಪ, ೧೩) ವೀರ, ೧೪) ಕ್ರೂರ, ೧೫) ಬೀಭತ್ಸ, ೧೬) ಪಾತಾಳ, ೧೭) ಆಕಾಶ, ೧೮) ವಕ್ರ, ೧೯) ಛತ್ರ, ೨೦) ಶನಿಕ, ೨೧) ಸತ್ಯ ೨೨) ಅದ್ಭುತ, ೨೩) ವೇಗ, ೨೪) ವಿದಾರಣ, ೨೫) ಘೋರ, ೨೬) ಸಿದ್ಧ, ೨೭) ಶಾಂತ, ೨೮) ಯೋಗಾನಂದ ೨೯) ಲಕ್ಷ್ಮೀ, ೩೦) ಭದ್ರ, ೩೧) ರಾಜ, ೩೨) ವರಾಹನೃಸಿಂಹ. 'ನೃಸಿಂಹ ಸ್ತವರಾಜ' ದಲ್ಲಿಯೂ ೩೨ ನೃಸಿಂಹರೂಪಗಳ ವರ್ಣನೆ ಇದೆ. ಈ ಅಧ್ಯಾಯಗಳನ್ನು ಮೂರು ಭಾಗಗಳಾಗಿ ವಿಂಗಡಿಸಲಾಗಿದೆ. ಮೊದಲ ೪ ಅಧ್ಯಾಯಗಳು ನೃಸಿಂಹಸ್ವಾಮಿ ಹಾಗೂ ಗಂಗಧಾರತೀರ್ಥದ ಮಹಿಮೆಯನ್ನೂ ಪ್ರಾಮುಖ್ಯತೆಯಲ್ಲಿ ಅಹೋಬಿಲ ಬಿಟ್ಟರೆ ಇದು ಎರಡನೆಯದೆಂದೂ ಹಾಗೂ ದೆಟ್ಟದಿಂದ ತಳ್ಳಲ್ಪಟ್ಟ ಪ್ರಹ್ಲಾದನನ್ನು ರಕ್ಷಿಸಿದ ವಿಚಾರಗಳಿವೆ. ರಕ್ಷಣೆಕೊಟ್ಟ ನೃಸಿಂಹದೇವರಿಗೆ 'ಪ್ರಹ್ಲಾದ ಅನುರಾಗಮೂರ್ತಿ' ಎಂದು ಹೆಸರಿದೆ. ೫ ರಿಂದ ೨೯ ಅಧ್ಯಾಯಗಳಲ್ಲಿ ಕೃತಯುಗದ ಮಹಿಮೆ ಅವತಾರ ಹಾಗೂ ಪುರಾಣಗಳ ವಿಚಾರ ಮತ್ತು ಕೊನೆಯ ಮೂರು ಅಧ್ಯಾಯಗಳಲ್ಲಿ ರಾಜಾ ಪುರೂರವನ ಭಕ್ತಿ ಪ್ರಕಾರಗಳು ವರ್ಣಿಸಲ್ಪಟ್ಟಿವೆ.

ಎರ್ರಾಪ್ರಗಡನ 'ನೃಸಿಂಹಪುರಾಣ', ಧೂರ್ಜಟಿಯ 'ಕೃಷ್ಣರಾಯ ವಿಜಯ'ದಲ್ಲಿ 'ಸಿಂಹಾದ್ರಿ' ಎಂದು ಉಲ್ಲೇಖಗಳಿವೆ. ಚಂದನ ಯಾತ್ರೆಯಲ್ಲಿ ಸೇರುವ ಭಕ್ತಕೋಟಿ ಹಾಗೂ ಅವರ ಸೇವೆಯನ್ನು ಶ್ರೀನಾಥಕವಿಯು 'ಸಿಂಹಾದ್ರಿ ತಿರುನಾಳ್ಳು' ಎಂದೂ, ಕರೆದಿದ್ದಾನೆ. ಕೃಷ್ಣದೇವರಾಯನ 'ಅಮುಕ್ತಮಾಲ್ಯದ', ಅಲಸಾನಿಪೆದ್ದನನ ಮನುಚರಿತ್ರ, ಕಾಂತ ಕೃಷ್ಣಮಾಚಾರ್ಯನ ಸಿಂಹಗಿರಿ ವಚನಗಳಲ್ಲಿ ಉಲ್ಲೇಖಗಳಿವೆ. ದಶಾವತಾರ ಎಂಬ ಜಾನಪದ ಗೀತೆಯಲ್ಲಿ ಸಿಂಹಾಚಲದೇವರನ್ನು ಕುರಿತ ಪದ್ಯಗಳಿವೆ. ಅನೇಕ ಕವಿಗಳು ಸ್ಥಳಪುರಾಣದ ಆಧಾರದಮೇಲೆ ಸಿಂಹಾದ್ರಿಶತಕಂ, ಲಕ್ಷ್ಮಿನೃಸಿಂಹಚರಿತಮು ಮುಂತಾದ ಕವಿತೆ ಪ್ರಬಂಧಗಳನ್ನು ರಚಿಸಿರುತ್ತಾರೆ.

'ಸಿಂಹಾದ್ರಿ ಶತಕಂ'ನ ವಿಶೇಷವೇನೆಂದರೆ ಕ್ಷೇತ್ರದಲ್ಲಿ ಆದ ಧಾಳಿಗಳ ಬಗ್ಗೆ ಉಲ್ಲೇಖವಿದೆ.

ಬಹುಶಃ ಇಡೀ ಆಂಧ್ರದಲ್ಲಿ ಶ್ರೇಷ್ಠವಾದ ಶಿಲ್ಪ ಕಲೆಯಿಂದ ಕೂಡಿದ ಕ್ಷೇತ್ರ ಸಿಂಹಾಚಲ ಎಂದರೆ ತಪ್ಪಾಗಲಾರದು. ರಾಜರ ಕೊಡುಗೆಯಿಂದ ಈ ಕ್ಷೇತ್ರ ಲಲಿತಕಲೆಯ ತವರೂರಾಗಿದೆ. ಭಗವದಾಜ್ಞೆಯಿಂದಾದ ಸಂತೋಷದಿಂದ ಪುರೂರವನು ಭಗವತ್ಪ್ರೀತ್ಯರ್ಥಕ್ಕಾಗಿ ಮಾಡುವ ಸೇವೆಯನ್ನು ಅಂಗ ಭೋಗವೆಂದೂ, ಸಂಗೀತ ನೃತ್ಯಕ್ಕಾಗಿ ರಂಗಭೋಗ ಎಂದು ಘೋಷಿಸಿ ದೇವಸ್ಥಾನದ ನಿರ್ಮಾಣಕ್ಕೆ ಕೈ ಇಟ್ಟ. ಪ್ರಥಮಬಾರಿಗೆ ಕಾಲಿಟ್ಟ ಬ್ರಿಟಿಷರು ಫ್ರೆಂಚರು ಕ್ಷೇತ್ರದ ಶಿಲ್ಪಕಲಾ ವೈಭವವನ್ನು ನೋಡಿ 'AESTHETIC BEAUTY' ಎಂದು ಮಾರು ಹೋದರು. ಕಲ್ಯಾಣ ಮಂಟಪದ ನಾಗ - ನಾಗಿನಿಯರ ಮಿಥುನ ಶಿಲ್ಪಗಳು, ನಾಗ, ವ್ಯಾಳಿ, ಸಿಂಹ, ಶಾರ್ದೂಲ ಕಂಭಗಳು ಸೊಗಸಾಗಿವೆ. ಗಣದೇವತೆಗಳು, ಆವರ್ಣ ಹಾಗೂ ಪಾರ್ಶ್ವದೇವತೆಗಳು, ದೊಡ್ಡ ಆಕಾರದ (೫-೬ ಅಡಿ ಎತ್ತರದವು) ವರಾಹ, ನೃಸಿಂಹ, (ಭಕ್ತರು ತಾವೇ ಇವಕ್ಕೆ ಪೂಜೆ ಮಾಡುವರು) ತ್ರಿವಿಕ್ರಮ ಮೂರ್ತಿಗಳು, ಗೋಡೆಗಳಲ್ಲಿ ಕಾಳಿಂಗಮರ್ದನ, ಗೋವರ್ಧನೇಶ, ವೇಣುಗೋಪಾಲ ಹಾಗೂ ೧೯ ವಿವಿಧ ವಿಷ್ಣುಮೂರ್ತಿಗಳು ಇವೆ. ೩೨ ನೃಸಿಂಹಮೂರ್ತಿಗಳನ್ನು ವಿವಿಧ ಕಂಭಗಳಲ್ಲಿ ದ್ವಾರಗಳ ಮೇಲೆ ಹಾಗೂ ಮಂಟಪಗಳಲ್ಲಿ ನೋಡಬಹುದು. ೬ ಬೃಹತ್ ಕಂಭಗಳ ಸಾಲಿನಲ್ಲಿ ತಲಾ ೧೬ ಮೂರ್ತಿಗಳಿವೆ. ದೇವಸ್ಥಾನದ ರಚನೆಯು ನಾಗರ + ದ್ರಾವಿಡ ಸಂಮಿಶ್ರ ಶೈಲಿಯಲ್ಲಿದೆ. ರಾಜಗೋಪುರದ ಪ್ರಥಮ ಹಂತದಲ್ಲೇ ವರಾಹನೃಸಿಂಹ ನಿಜರೂಪ ಮೂರ್ತಿ, ಇತರ ಅಂತಸ್ತುಗಳಲ್ಲಿ ಶಾಸ್ತ್ರೋಕ್ತರೀತಿಯಲ್ಲಿ ದೇವಕೋಷ್ಠಮೂರ್ತಿಗಳು, ಲತಾಕನ್ಯೆಯರು, ಗೋಪುರವನ್ನು ಹೊತ್ತ ದೊಡ್ಡ ಮೂರ್ತಿಗಳು ಗಂಧರ್ವ ಕಿನ್ನರ ಕಿಂಪುರುಷ ಮುಂತಾದ ಮೂರ್ತಿ ಶಿಲ್ಪಗಳಿವೆ.

## ದಿವ್ಯತೆ :

ಬೆಟ್ಟದ ತಪ್ಪಲಲ್ಲಿರುವ ಮಹಾದ್ವಾರ ಭೈರವದ್ವಾರವೆಂದೂ, ನಿತ್ಯಮೂರ್ತಿ ಲಿಂಗಾಕಾರವಾಗಿರುವುದರಿಂದ ಇದು ಶೈವಕ್ಷೇತ್ರವೆಂದೂ ಹಾಗೂ ಈ ಕೆಳಕಂಡ ವಾದವಿವಾದಗಳು, ದಂತ ಕತೆಗಳು ಪ್ರಚಲಿತವಾಗಿತ್ತು :

ಅ) ಪ್ರಹ್ಲಾದನ ಅನಂತರ ಸಹಸ್ರಾರು ವರ್ಷಗಳು ಮೂರ್ತಿಯು ಶಿಥಿಲಾವಸ್ಥೆಯಲ್ಲಿದ್ದುದರಿಂದ ಗಂಧಲೇಪನ ಅನಿವಾರ್ಯ.

ಆ) ಮೂರ್ತಿಯನ್ನು ಪೂರ್ಣಗೊಳಿಸಲು ಸ್ಥಪ ಗಳು ತೊಡಗಿದಾಗ ಮೂರ್ತಿಯ ದೇಹದಿಂದ ರ ಸ್ರಾವ ಕಂಡುಬಂದು ಎಲ್ಲರೂ ಗಾಬರಿಯಾಗಿ ಗಂ ಲೇಪನದಿಂದ ರಕ್ತಸ್ರಾವ ನಿಂತಿತು. ಇದರಿಂದಾ ಶಿಲ್ಪಕೃತಿ ಪೂರ್ಣವಾಗಲಿಲ್ಲ.

ಇ) ತುಳಸಿ - ವಿಭೂತಿ ದೇವರ ಹತ್ತಿರ ಪರಿ ಕ್ಷೆಗಾಗಿ ಇಟ್ಟಿದ್ದರು. ಬೆಳಗ್ಗೆ ನೋಡಿದಾಗ ತುಳ ಅಲ್ಲಿತ್ತು.

ಭಗವದ್ರಾಮಾನುಜರು ಪೂರಿಜಗನ್ನಾಥ ಮಂ ರದಲ್ಲಿ ಪಾಂಚರಾತ್ರ ಆಗಮನ ಪದ್ಧತಿಯನ್ನು ಅನ ಸರಿಸಲು ಪಂಡಾಗಳಿಗೆ ಶಿಫಾರ್ಸು ಮಾಡಿ ಸ್ವಸ್ಥಾನ ಹಿಂದಿರುಗುವಾಗ ಶ್ರೀಕೂರ್ಮ, ಸಿಂಹಾಚಲಗಳಿ ಭೇಟಿ ಇತ್ತರು. ಇದರಿಂದಾಗಿ ಇದು ಶ್ರೀವೈಷ್ಣ ವಕ್ಷೇತ್ರವೆಂದು ಎಲ್ಲರೂ (ಶೈವರೂ ಸೇರಿ) ಒಪ್ಪಿ ದರು. ಇದರ ಸಾಂಕೇತಕವಾಗಿ ಇಂದಿಗೂ ಶ್ರೀ ಶ್ರೀ ಶ್ರೀ ತ್ರಿದಂಡಿ ಚಿನ್ನ ಶ್ರೀಮನ್ನಾರಾಯಣರಾಮಾನು ಜೀಯರರ ಮಠವು ಸೇವೆಸಲ್ಲಿಸುತ್ತಿದೆ. ನಾರಾಯಣ ಪಂಡಿತನ 'ಮದ್ವವಿಜಯ'ದ ಪ್ರಕಾರ ಮಧ್ವಾಚಾ ರ್ಯರು ಬದರಿಯಾತ್ರೆಯಿಂದ ಹಿಂತಿರುಗುವಾ

ಈ ಕ್ಷೇತ್ರಕ್ಕೆ ಭೇಟಿಕೊಟ್ಟರು. ಕ್ರಮೇಣ ಮಾಧ್ವ ಮಠವೊಂದು ಕಾಣಿಸಿಕೊಂಡಿತು. ಹಲವಾರು ದಶಕಗಳು ಭೋಗ ಪರೀಕ್ಷಸ್ಥಾನ ಈ ಮಠಕ್ಕೆ ಸೇರಿತ್ತು. ಕ್ರಮೇಣ ತ್ರಿದಂಡಿ ಮಠ ವಹಿಸಿಕೊಂಡಿತು. ಹೀಗೆ ಮಹಾನರ ಪಾದಾರ್ಪಣೆಯಿಂದಾಗಿ ಸಾಮಾನ್ಯಕ್ಷೇತ್ರವು ದಿವ್ಯಕ್ಷೇತ್ರವಾಗಿ ಪರಿವರ್ತಿಸಲ್ಪಟ್ಟಿತ್ತು. ಪಾರಂಪರಿಕವಾಗಿ ವಿಜಯನಗರಂ ಜಮೀನ್ದಾರರೇ ದೇವಸ್ಥಾನದ ವಿಶ್ವಸ್ಥಮಂಡಲಿಗೆ ಮುಖ್ಯಸ್ಥರಾಗಿ ಕ್ಷೇತ್ರದ ನಿರ್ವಹಣೆಯನ್ನು ವಹಿಸಿಕೊಂಡು ಬಂದಿರುತ್ತಾರೆ. ಅಧಿಕೃತವಾಗಿ ೧೯೪೯ ರಲ್ಲಿ ಕ್ಷೇತ್ರವು ಹಿಂದೂ ಧರ್ಮದತ್ತಿ ಮಂಡಳಿಯ ವ್ಯಾಪ್ತಿಗೆ ಒಳಪಟ್ಟು ಶಾಸಬದ್ಧಸಂಸ್ಥೆ (Statutory Body) ಎಂದು ಮುಂದುವರೆಯಿತು. ದೇವಸ್ಥಾನದ ಕಾರ್ಯನಿರ್ವಹಣೆ ಲೌಕಿಕ ವ್ಯವಹಾರಕ್ಕಾಗಿ ಒಬ್ಬ ಹಿರಿಯ ಅಧಿಕಾರಿ, ಸಹಾಯಕ ಅಧಿಕಾರಿ ಹಾಗೂ ಸಿಬ್ಬಂದಿವರ್ಗದವರಿದ್ದಾರೆ.

ಇದು ಸಿರಿವಂತ ಕ್ಷೇತ್ರವೂ ಆಗಿದೆ. ಅರಣ್ಯ ಸಂಪತ್ತು, ಮಾವು ಅನಾನಾಸ್ ತೋಟಗಳು, ಬಸ್ಸುಗಳು, ಹುಂಡಿ, ಸೇವಾಶುಲ್ಕ ವರಮಾನ, ಗೋಡಂಬಿ, ದೆಣಚುಕಲ್ಲು ಗುತ್ತಿಗೆ ವ್ಯವಹಾರಗಳು ದೇವಸ್ಥಾನದ ವರಮಾನದ ದೃಷ್ಟಿಯಿಂದ ಪ್ರಮುಖವಾದುವು. ಕ್ಷೇತ್ರಕ್ಕೆ ಸೇರಿದ 'ಪೂಲ್‌ಬಾಗ್' ಉದ್ಯಾನವನದಿಂದಲೇ ಸುತ್ತಮುತ್ತಲಿರುವ ಪ್ರದೇಶಗಳಿಗೆ ಹೂವು ಹಣ್ಣು ಪೂರೈಕೆ. ಊಟ ವಸತಿಗಳಿಗಾಗಿ ರಾಮಾನುಜಕೂಟ, ಛತ್ರಗಳು, ಶೆಡ್‌ಗಳು ನಿತ್ಯ ಅನ್ನದಾನ ಯೋಜನೆಗಳಿವೆ. ವಿಶಾಖಪಟ್ಟಣದಲ್ಲಿ ಪ್ರಹ್ಲಾದ ಪ್ರಾರ್ಥನಾಮಂದಿರ ಹಾಗೂ ಕ್ಷೇತ್ರದ ವ್ಯಾಪ್ತಿಗೆ ಒಳಪಟ್ಟ ವಿದ್ಯಾಸಂಸ್ಥೆಗಳಿವೆ. ಪಟ್ಟಣದಿಂದ ಕ್ಷೇತ್ರಕ್ಕೆ ೧೩ ಕಿ.ಮೀ. ದೂರ. ಉದ್ದಕ್ಕೂ ಒಂದಲ್ಲಾ ಒಂದು ಉದ್ಯಮ, ವಸತಿ ಗೃಹಗಳು ಮಿಲಿಟರಿ ಘಟಕಗಳು ವ್ಯಾಪಿಸಿದ್ದು, ಕ್ಷೇತ್ರವು ಈಗ ವಿಶಾಖಪಟ್ಟಣದ ಪ್ರಮುಖ ಬಡಾವಣೆಯಂತಿದೆ. ತಂಪುವಾತಾವರಣದ ಆಕರ್ಷಣೆಯಿಂದ ಪ್ರವಾಸೋದ್ಯಮವು ಅಭಿವೃದ್ಧಿಹೊಂದಿದೆ.





ಸಿಂಹಾಚಲದ ದೇವರಿಗೆ ತಿ. ತಿ. ದೇವಸ್ಥಾನಗಳವರು ಶ್ರೀ ವೆಂಕಟೇಶ್ವರಸ್ವಾಮಿಯ ಪರವಾಗಿ ರೇಷ್ಮೆ ವಸ್ತ್ರಗಳನ್ನು ಈಚೆಗೆ ವಿಶಾಖ ಪಟ್ಟಣದಲ್ಲಿ ಅದ್ಭುತ ಶಾಂತಿಯಜ್ಞ ನಿರ್ವಹಣೆಯ ಕಾಲದಲ್ಲಿ ನೀಡಿದರು. ಈ ರೇಷ್ಮೆ ವಸ್ತ್ರಗಳನ್ನು ತಲೆಯ ಮೇಲೆ ಹೊತ್ತು ತಂದ ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶ್‌ಕುಮಾರ್ ದಂಪತಿಗಳನ್ನೂ ತಿ.ತಿ. ದೇ. ಆಸ್ಥಾನ ವಿದ್ವಾಂಸರನ್ನೂ ಸಿಂಹಾಚಲದ ನೃಸಿಂಹಸ್ವಾಮಿ ಆಲಯದಲ್ಲಿ ಕಾಣಬಹುದು.



ತಿರುಮಲೆ ತಿರುಪತಿ ದೇವಸ್ಥಾನಗಳು -- ತಿರುಪತಿ.



# ಶ್ರೀ ವೆಂಕಟೇಶ್ವರ ವನಾಭಿವೃದ್ಧಿ ಯೋಜನೆ



ತರುವೊಂದ ಬೆಳೆವವನು ದೇವರಾ ಸೇವಕನು
ಹರಿಪನವ ತಲೆಮಾರುಗಳಿಗೆಲ್ಲ ಕರುಣೆಯನು
ಹರಸುವರು ಅವನ, ಜನ, ಅವನೆಂದು ನೋಡದವರು



ತಿರುಮಲೆಯ ಕಾಡುಗಳು ಶ್ರೀ ವೆಂಕಟೇಶ್ವರಸ್ವಾಮಿ ತನ್ನ ಭಕ್ತರಿಗೆಂದೇ ನೀಡಿದ. ಪ್ರಶಸ್ತ ವರವಾಗಿದೆ. ದೇವರು ಸ್ವಯಂವ್ಯಕ್ತನಾದ ತಿರುಮಲೆಯ ಪವಿತ್ರ ಪರ್ವತದ ಅಮೂಲ್ಯವಾದ ಕಾಡುಗಳನ್ನು ಪರಿರಕ್ಷಿಸಿಕೊಳ್ಳುವ ತೀವ್ರ ಆಕಾಂಕ್ಷೆಯಿಂದ ತಿರುಮಲೆ ತಿರುಪತಿ ದೇವಸ್ಥಾನಗಳು 1981 ರಲ್ಲಿ ಜೀವ ಸೌಂದರ್ಯಯೋಜನೆಯಡಿಯಲ್ಲಿ ತಿರುಪತಿ, ತಿರುಮಲೆಗಳಲ್ಲಿ 29 ಲಕ್ಷ ಗಿಡಗಳನ್ನು ಬೆಳೆಸುವ ಮಹತ್ವಾಕಾಂಕ್ಷೆಯ ಅರಣ್ಯಾಭಿವೃದ್ಧಿ ಕ್ರಮವನ್ನು ಕೈಗೊಂಡು ಕ್ರಿಯಾಶೀಲವಾಯಿತು. ಈ ಯೋಜನೆಯ ಮೂಲ ಉದ್ದೇಶ -- ತಿರುಪತಿಯ ತಪ್ಪಲು ಪ್ರದೇಶದಲ್ಲೂ, ತಿರುಮಲೆಯ ಪರ್ವತಾವಳಿಯಲ್ಲೂ ಜೈವಿಕ ವಾತಾವರಣವನ್ನು ಪರಿರಕ್ಷಿಸಿ ಸಂವರ್ಧಿಸುವುದು.

ಈ ಯೋಜನೆಯ ಸಾಫಲ್ಯದಿಂದ ಉತ್ತೇಜಿತರಾಗಿ ಉತ್ಸಾಹಿತರಾಗಿ ತಿರುಮಲೆ ತಿರುಪತಿ ದೇವಸ್ಥಾನಗಳು ಮತ್ತೂ ಹಲವಾರು ಕಾರ್ಯಕ್ರಮಗಳನ್ನು ಅದೇ ದಿಕ್ಕಿನಲ್ಲಿ ಹಮ್ಮಿಕೊಂಡಿದೆ. ಇದರ ಹೆಸರು--

## ಶ್ರೀ ವೆಂಕಟೇಶ್ವರ ವನಾಭಿವೃದ್ಧಿಯೋಜನೆ

ತಿ. ತಿ. ದೇ. ಗಳ ಅರಣ್ಯ ವಿಭಾಗ ಹಮ್ಮಿಕೊಂಡಿರುವ ಈ ಅರಣ್ಯಾಭಿವೃದ್ಧಿ ಯೋಜನೆಯಲ್ಲಿ ಸಾರ್ವಜನಿಕರೂ ಭಾಗವಹಿಸಬಹುದಾದ ವಿಶೇಷ ಅವಕಾಶವನ್ನು ಕಲ್ಪಿಸಲಾಗಿದೆ. ಈ ಯೋಜನೆಯ ಹಲವಾರು ಪ್ರಮುಖ ವಿವರಗಳನ್ನು ಪಟ್ಟಿ ಮಾಡಲಾಗಿದೆ.

**ವೃಕ್ಷಸಂವರ್ಧನ ಯೋಜನೆ :** ರೂ.೨೫೦೦೦ - ದಾನವನ್ನು ನೀಡುವವರ ಹೆಸರಿನಲ್ಲಿ ಅಥವಾ ಅವರು ಅಪೇಕ್ಷಿಸುವ ಹೆಸರಿನಲ್ಲಿ ೫೦೦ ಸಸಿಗಳನ್ನು ತಿರುಪತಿ ತಿರುಮಲೆ ಗಳಲ್ಲಿ ನೆಟ್ಟು ಐದು ವರ್ಷ ಅವುಗಳನ್ನು ನೋಡಿಕೊಳ್ಳಲಾಗುವುದು.

**ವೃಕ್ಷಪ್ರಸಾದ :** ರೂ.೧೫೦೦೦ - ದಾನವನ್ನು ನೀಡುವವರ ಪರವಾಗಿ ತಿರುಪತಿ, ತಿರುಮಲೆಯಲ್ಲಿ ಪ್ರತಿವರ್ಷ ೧೦೦ ಫಲ, ಪುಷ್ಪ ತರುಗಳನ್ನು ಬೆಳೆಸಲಾಗುವುದು. ಹತ್ತುವರ್ಷಗಳ ಕಾಲ ದಾನಿಗಳ ಅಥವಾ ಅವರು ಅಪೇಕ್ಷಿಸುವ ಹೆಸರಿನಲ್ಲಿ ಪ್ರತಿವರ್ಷ ೧೦೦ ಹೂ ಹಣ್ಣುಗಳ ಸಸಿಗಳನ್ನು ವಿತರಿಸಲಾಗುವುದು -

**ಸ್ಮಾರಕ ವನಗಳು:** ರೂ ೫೦೦೦ ದಾನ ನೀಡುವವರ ಹೆಸರಿನಲ್ಲಿ ತಿರುಪತಿ ತಿರುಮಲೆಗಳಲ್ಲಿ ಹತ್ತುಮರಗಳನ್ನು ಒಂದೆಡೆ ನೆಟ್ಟು ಐದುವರ್ಷ ನೋಡಿಕೊಳ್ಳಲಾಗುವುದು.

**ವನ ಸಂರಕ್ಷಣ ಭಾಗಸ್ವಾಮ್ಯ:** ರೂ ೨೦೦೦ ದಾನದಿಂದ ದಾನಿಗಳ ಹೆಸರನ್ನು ಹಿರಿದಾಗಿ ಪ್ರಕಟಿಸುವ ಫಲಕದೊಡನೆ ತಿರುಮಲೆಯ ವನಾಚ್ಛಾದನೆಯನ್ನು ಸಂರಕ್ಷಿಸುವ ಯೋಜನೆಯಿದು.

**ಮುಖ್ಯ ಸೂಚನೆ:-** ೧. ಈ ಎಲ್ಲ ದಾನಗಳೂ, ೩೫ ಸಿ.ಸಿ.ಬಿ ಕಲಮಿನಂತೆ ನೂರು ಶತಾಂಶ ಆದಾಯಕರ ವಿಮುಕ್ತ ವಾಗಿರುತ್ತದೆ.

೨. ಈ ಪರಿಷ್ಕರಣಗಳು ೧-೨-೯೬ ರಿಂದ ಜಾರಿಗೆ ಬಂದಿವೆ. ಅದಕ್ಕೂ ಹಿಂದೆ ಶ್ರೀ ವೆಂಕಟೇಶ್ವರ ವನಾಭಿವೃದ್ಧಿ ಯೋಜನೆಯಲ್ಲಿ ಸೇರಿದವರಿಗೆ ಹಳೆಯ ಸೌಲಭ್ಯಗಳು ಮುಂದುವರೆಯುತ್ತವೆ.

ತಿರುಮಲೆಯ ಅರಣ್ಯನಮ್ಮ ಪರಂಪರೆಯ ಅವಿಭಾಜ್ಯ ಅಂಗ. ಅದನ್ನು ಸಂರಕ್ಷಿಸಿ ಸಂವರ್ಧನಗೊಳಿಸುವ.

ದಶಕೂಪ ಸಮೋವಾಪಿ ದಶ ವಾಪಿ ಸಮೋ ಹ್ರದ
ದಶಹ್ರದ ಸಮಃ ಪುತ್ರ ದಶ ಪುತ್ರ ಸಮೋ ದ್ರುಮ

ಹತ್ತು ಬಾವಿಗಳು ಒಂದು ಕೆರೆಗೂ, ಹತ್ತು ಕೆರೆಗಳು ಒಂದು ಸರೋವರಕ್ಕೂ ಹತ್ತು ಸರೋವರಗಳು ಒಬ್ಬ ಮಗನಿಗೂ, ಹತ್ತು ಮಕ್ಕಳು ಒಂದು ತರುವಿಗೂ ಸಮ.

ಈ ಉದಾತ್ತ ಯೋಜನೆಯಲ್ಲಿ ಪಾಲುಗೊಂಡು ಉದಾರವಾಗಿ ದಾನನೀಡಿ ತಿರುಮಲೆಯನ್ನು -- ಶ್ರೀ ವೆಂಕಟೇಶ್ವರಸ್ವಾಮಿ ನಿವಾಸವನ್ನು -- ವನಸಿರಿಯಿಂದಲೂ ಸೌಂದರ್ಯಸಿರಿಯಿಂದಲೂ ಕೂಡಿರುವಂತೆ ಮಾಡುವಲ್ಲಿ ಸಹಕರಿಸಬೇಕೆಂದು ಕೋರಲಾಗಿದೆ.



ದಾನಗಳ ಡಿ.ಡಿ. ಯನ್ನು ತಾವು ಕಳುಹಿಸ ಬೇಕಾದ ವಿಳಾಸ:

ಕಾರ್ಯನಿರ್ವಹಣಾಧಿಕಾರಿ, ತಿ.ತಿ.ದೇವಸ್ಥಾನಗಳು, ತಿರುಪತಿ.



ಕಾರ್ಯನಿರ್ವಹಣಾಧಿಕಾರಿ

# ನಾರದ

---ಅನಂತ ಚಿಂತಾಮಣಿ ಜ್ಯೋತಿಷೀ.

ನಾರದರೆಂದ ಕೂಡಲೇ ವೀಣಾಪಾಣಿ - ವಾದ್ಯಧಾರಿಯೆಂದು ನೆನಪಾಗುವುದು ಸಹಜ. ನಾರದ ಎಂಬ ಪದದ ಅರ್ಥ ಹೀಗಿದೆ. ನಾರ ಎಂದರೆ ಮಾನವರಿಗೆ ಉಪಯೋಗವಾಗುವ ಅರಿವು. ದ ಎಂದರೆ ಕೊಡುವವನು ಎಂದು ಅರ್ಥ. ದೇವರ್ಷಿಗಳಲ್ಲಿ ಶ್ರೇಷ್ಠರಾದ ನಾರದರ ವೀಣೆಯ ಹೆಸರು ಮಹತೀ ಎಂದು ಖ್ಯಾತವಾಗಿದೆ. ನಾರದರು ವೇದ ಉಪನಿಷತ್ತು ಜ್ಯೋತಿಷ್ಯ ಸಂಗೀತ ಶಾಸ್ತ್ರ ಪಾರಂಗತರು. ವರ್ಣೋಚ್ಚಾರಣೆಯ ಕುರಿತಾಗಿ ನಾರದ ಶಿಕ್ಷಾ, ಪಾಂಚರಾತ್ರ, ಆಳ ಭಕ್ತಿಸ್ವರೂಪಗಳ ನಾರದ ಭಕ್ತಿಸೂತ್ರ ಮುಂತಾದ ಅನೇಕ ಕೃತಿರತ್ನಗಳನ್ನು ರಚಿಸಿದ ನಾರದರ ಪೂರ್ವಜನ್ಮದ ವೃತ್ತಾಂತ ಇಂತಿದೆ.

ನಾರದರು ಉಪಬರ್ಹಣಾ ಎಂಬ ಗಂಧರ್ವರಾಗಿದ್ದರು. ಬಹು ಸುಂದರಾಂಗರೂ ಗಾನದಲ್ಲಿ ಚತುರರು ಎನಿಸಿದ್ದರು. ಒಮ್ಮೆ ದಕ್ಷ ಬ್ರಹ್ಮನು ನಿರ್ಣಯಿಸಿದ ಯಾಗದ ವೇಳೆಯಲ್ಲಿ ಉಪ ಬರ್ಹಣರು ಭಗವಂತನ ಸ್ತುತಿಪರ ಕೀರ್ತನೆ ಹಾಡುತ್ತಿದ್ದರೂ ಅವರ ಲಕ್ಷ್ಯ ಅಪ್ಸರೆಯರ ಮೇಲೆ ಇದ್ದದನ್ನು ಕಂಡ ದಕ್ಷ ಬ್ರಹ್ಮನು ಅವರಿಗೆ ಕ್ಷುದ್ರ ಮಾನವರಾಗಿ ಹುಟ್ಟಲು ಶಾಪ ನೀಡಿದರು. ಈ ಶಾಪದಿಂದ ಹೆದರಿದ ಉಪಬರ್ಹಣರು ದಕ್ಷಬ್ರಹ್ಮನ ಹತ್ತಿರ ಕ್ಷಮೆ ಯಾಚಿಸಿದಾಗ ಸಜ್ಜನರ ಸಂಗದಿಂದ ಒಳಿತಾಗುವದೆಂಬ ದಾರಿಯನ್ನು ತೋರಿಸಿದರು. ಆಮೇಲೆ ಆಶ್ರಮದ ದಾಸಿಯ ಮಗನಾಗಿ ಜನಿಸಿದರು. ಮಳೆಗಾಲದಲ್ಲಿ ಸನ್ಯಾಸಿಗಳು ಆ ಆಶ್ರಮದ ಹತ್ತಿರ ಬಂದು ಉಳಿದಾಗ ನಾರದರಿಗೆ ಸತ್ಸಹವಾಸ ಲಭಿಸಿತು. ಮಳೆಗಾಲದ ನಂತರ ಅವರು ಹೋಗುವಾಗ ನಾರದರಿಗೆ ಬೇಸರವಾಯಿತು. ಸನ್ಯಾಸಿಗಳು ಅವರಿಗೆ ದ್ವಾದಶಾಕ್ಷರಗಳ ವಿಷ್ಣು ಮಂತ್ರವನ್ನು ಜಪಿಸಲು ಉಪದೇಶಿಸಿದರು. ಈ ಮಂತ್ರ ಜಪದಿಂದ ನಾರದರು ಪುನೀತರಾಗಹತ್ತಿದರು. ನಾರದರ ದಾಸಿ ತಾಯಿಯು ಮೃತಳಾಗಿ ಅನಾಥರಾದಾಗ ಅವರು ಭಗವಂತನನ್ನೇ ತಂದೆ ತಾಯಿಯೆಂದು ಭಾವಿಸಿ ನಾಮ ಸಂಕೀರ್ತನೆ ಮಾಡುತ್ತ ತಿರುಗಾಡಹತ್ತಿದರು. ಒಂದು ಸರೋವರದಲ್ಲಿ ಸ್ನಾನ ಮಾಡಿದಾಗ ನಾರದರಿಗೆ ಸ್ಫೂರ್ತಿಬಂದು ನಾಮಸಂಕೀರ್ತನೆ ಮಾಡಹತ್ತಿದಾಗ ಮುಂದಿನ ಜನ್ಮದಲ್ಲಿ ಭಗವಂತನ ದರ್ಶನ ಸಾಧ್ಯ ಎಂಬ ಅಶರೀರವಾಣಿ ಕೇಳಿಬಂದಿತು. ಆಮೇಲೆ ಧ್ಯಾನಯೋಗದಿಂದ ದೇಹತ್ಯಾಗ ಮಾಡಿದರು. ಮುಂದಿನ ಜನ್ಮದಲ್ಲಿ ಭಗವತ್ ಸಾನ್ನಿಧ್ಯ ಲಭಿಸಿತು.

ದಕ್ಷಬ್ರಹ್ಮನು ತನ್ನ ಮಕ್ಕಳಿಗೆ ತಪಸ್ಸು ಮಾಡಿ ಶಕ್ತಿ ಸಾಮರ್ಥ್ಯ ಪಡೆದು ಗೃಹಸ್ಥಧರ್ಮ ಪಾಲಿಸಲು ಹೇಳಿದಾಗ ಅಲ್ಲಿಗೆ ನಾರದರು ಹೋಗಿ ಅವರಲ್ಲಿ ವೈರಾಗ್ಯ ಹುಟ್ಟಿಸಿದರು. ಮದುವೆ ಮಾಡುವ ದಕ್ಷ ಬ್ರಹ್ಮನ ಯೋಜನೆ ತಲೆಕೆಳಗಾದವು. ಇದಕ್ಕೆಲ್ಲ ನಾರದರೇ ಕಾರಣರೆಂದು ಭಾವಿಸಿ ಅಲೆಮಾರಿಯಾಗಲು ನಾರದರಿಗೆ ದಕ್ಷ ಬ್ರಹ್ಮನು ಶಾಪ ಕೊಟ್ಟನು. ಇದು ನಾರದರ ಬಾಳಿಗೆ ವರವೆನಿಸಿತು.

ವಾಲ್ಮೀಕಿಗೆ ಆದಿಕಾವ್ಯ ಶ್ರೀಮದ್ರಾಮಾಯಣ ಬರೆಯಲು ನಾರದರೇ ಕಾರಣೀಭೂತರಾಗಿದ್ದಾರೆ. ಗೃಹಸ್ಥಾಶ್ರಮಿಗಳಾಗಿದ್ದು ಎಂತಹ ಕಷ್ಟಗಳು ಬಂದರೂ ಕೂಡ ಒಳ್ಳೆಯ ದಾರಿಯಲ್ಲಿ ನಡೆದು ಧರ್ಮವನ್ನು ಪಾಲಿಸುವವರು ಯಾರು ಎಂದು ವಾಲ್ಮೀಕಿಯು ನಾರದರಿಗೆ ಪ್ರಶ್ನಿಸಿದಾಗ ನಾರದರು ದಾಶರಥಿ ಶ್ರೀರಾಮ ಎಂದು ಉತ್ತರಿಸಿ ಅವರಿಂದ ಕಾವ್ಯವನ್ನು ಬರೆಸಿದರು. ನಾರದರಿಂದಲೇ ನಮಗೆ ಆದಿಕಾವ್ಯವು ದೊರಕಿತೆನ್ನಬಹುದಾಗಿದೆ.

ವ್ಯಾಸರೂ ಕೂಡ ನಾರದರ ಮಾತಿನಂತೆ ಭಾಗವತವನ್ನು ರಚಿಸಿದರು. ವ್ಯಾಸರಿಂದ ರಚಿತಗೊಂಡ ಮೂರು ಲಕ್ಷ ಶ್ಲೋಕಗಳನ್ನು ನಾರದರು ದೇವತೆಗಳಿಗೆ ಹೇಳಿದರೆಂದು ಒಂದು ಕಥೆ ಯಿದೆ.

ನಾರದರು ಸದ್ಧರ್ಮಿಗಳಿಗೆ ಯೋಗ್ಯ ಉಪದೇಶ ನೀಡಿ ಅವರನ್ನು ಸತ್ಕಾರ್ಯದಲ್ಲಿಡಲು ಪ್ರಯತ್ನಿಸುತ್ತಾರೆ. ಆದರೆ ನಾರದರು ದುಷ್ಟರಿಗೆ ಬೇಗ ಶಿಕ್ಷೆ ಸಂಭವಿಸಲು ಅವರಿಂದ ಹೆಚ್ಚಗಿನ ರೀತಿಯಲ್ಲಿ ಕೆಟ್ಟಕಾರ್ಯಗಳನ್ನು ಮಾಡಿಸುತ್ತಾರೆ. ಶೂರಸೇನ ದೇಶದ ಅರಸು ಚಿತ್ರಕೇತುವಿಗೆ ಎಷ್ಟೋ ಕಾಲದ ನಂತರ ಪುತ್ರ ಸಂತಾನವಾಯಿತು. ಇದಕ್ಕೆ ಮಲತಾಯಿಯ ಅಸೂಯಾಗ್ರಸ್ತಳಾಗಿ ವಿಷಪ್ರಾಶನ ಮಾಡಿಸಿ ಆ ಪುತ್ರನನ್ನು ಕೊಲ್ಲಿಸಿದಳು. ಮಗನ ಮರಣವು ರಾಜನಿಗೆ ದುಃಖ ತರಿಸಿತು. ಎಷ್ಟೋ ಜನರು ಸಮಾಧಾನಿಸಿದರೂ ರಾಜನು ರೋಧಿಸುತ್ತ ಕುಳಿತನು. ನಾರದರು ಕೂಡ ದುಃಖಿಸಬಾರದೆಂದು ಉಪದೇಶಿಸಿದರೂ ಯಶಸ್ವಿಯಾಗಲಿಲ್ಲ. ಕೊನೆಗೆ ನಾರದರು ಮಗುವನ್ನು ಯೋಗಶಕ್ತಿಯಿಂದ ಬದುಕಿಸಿದಾಗ ರಾಜನು ಆನಂದಿತನಾದನು. "ನನಗೆ ಅನೇಕ ಜನ್ಮಗಳಾಗಿವೆ. ಸಂತೆಯಲ್ಲಿ ರೂಪಾಯಿಯು ಬೇರೆ ಬೇರೆಯವರ ಕೈಗೆ ಹೋಗುತ್ತದೆ. ಜೀವನು ಕರ್ಮವಶಾತ್ ಓರ್ವಳ ಉದರದಲ್ಲಿ ಜನಿಸಿ ಅವನು ತನ್ನ ಕರ್ಮದಿಂದ ಮೃತನಾಗಿ ಇನ್ನೋರ್ವಳ ಹೊಟ್ಟೆಯಲ್ಲಿ ಜನಿಸುವನು. ನನ್ನ ಈ ಜನ್ಮ ಕಳೆದಿದೆ. ಮತ್ತೆ ಈ ಜನ್ಮಮರಣ ಚಕ್ರದಲ್ಲಿ ಸಿಲುಕುವದಿಲ್ಲ ಎಂದು ಆ ಅರಸಪುತ್ರನು ಹೇಳಿ ದೇಹತ್ಯಾಗ ಮಾಡಿದಾಗ ಚಿತ್ರಕೇತುವಿಗೆ ಜ್ಞಾನೋದಯವಾಯಿತು. ತದನಂತರದಲ್ಲಿ ನಾರದರಿಂದ ಮಂತ್ರೋಪದೇಶ ಪಡೆದು ಸನ್ಮಾರ್ಗದಲ್ಲಿ ನಡೆಯತೊಡಗಿದನು.

ವಸುದೇವ - ದೇವಕಿಯರ ವಿವಾಹವು ನಡೆದು ನಂತರ ಕಂಸನು ತನ್ನ ತಂಗಿಯನ್ನು ವಸುದೇವನೊಂದಿಗೆ ರಥದಲ್ಲಿ ಕುಳ್ಳಿರಿಸಿ ತಾನೇ ಸಾರಥಿಯಾಗಿ ವಸುದೇವನ ಮನೆಗೆ ಕಳಿಸಿಕೊಡುವಾಗ 'ಕಂಸನೇ ದೇವಕಿಯ ಅಷ್ಟಮ ಗರ್ಭದಿಂದ ಹುಟ್ಟುವ ಮಗುವಿನಿಂದ ನಿನ್ನ ಮರಣ' ಎಂಬ ಆಕಾಶವಾಣಿಯಾದ ನಂತರ ದೇವಕಿಯನ್ನು ಕೊಲ್ಲಲು ಸನ್ನದ್ಧನಾದನು. ವಸುದೇವನು ಅಂಗಲಾಚಿದಾಗ ಕಂಸನು ದೇವಕಿಯನ್ನು ಕೊಲ್ಲದೆ ಬಿಟ್ಟನು. ದೇವಕಿಗೆ ಹುಟ್ಟಿದ ಆರು ಮಕ್ಕಳು ತಂದು ಒಪ್ಪಿಸಿದಾಗ ಕೊಲ್ಲದೆ ಕಳಿಸಿದನು. ಕಂಸನಿಂದ ಪಾಪಕರ್ಮಗಳನ್ನು ಘಟಿಸದೆ ಇದ್ದರೆ ಪರಮಾತ್ಮನ ಅವತಾರ ಅಶಕ್ಯ ಎಂಬುದನ್ನು ಭಾವಿಸಿದ ನಾರದರು ಕಂಸನನ್ನು ರಹಸ್ಯವಾಗಿ ಕಂಡು ನಿನ್ನನ್ನು ಕೊಲ್ಲುವ ಯೋಜನೆ ದೇವತೆಗಳು ಹೂಡಿದ್ದಾರೆ ಎಂದು ಹೇಳಿದಾಕ್ಷಣ ಕಂಸನ ಕೋಪ ಹೆಚ್ಚಿತು. ವಸುದೇವ ದೇವಕಿ ಉಗ್ರಸೇನರನ್ನು ಸೆರೆಮನೆಗೆ ತಳ್ಳಿದನು. ತಾನೇ ರಾಜನಾಗಿ ಕಂಸನು ದಬ್ಬಾಳಿಕೆ ನಡೆಸತೊಡಗಿದನು. ಕಂಸನ ಪಾಪಕರ್ಮಗಳು ಹೆಚ್ಚಾಗತೊಡಗಿದ್ದು ಪಾಪದ ಕೊಡ ತುಂಬತೊಡಗಿದ ನಂತರವೇ ಕೃಷ್ಣನ ಜನ್ಮವಾಯಿತು.

ಉತ್ತಾನಪಾದನಿಗೆ ಸುನೀತಿ ಮತ್ತು ಸುರುಚಿ ಎಂಬ ಇಬ್ಬರು ಹೆಂಡಂದಿರು. ಸುನೀತಿಯ ಮಗನ ಮೇಲೆ ಸುರುಚಿಗೆ ಎಲ್ಲಿಲ್ಲದ ಕೋಪ. ಒಮ್ಮೆ ಸುನೀತಿಯ ಮಗ ಧ್ರುವನು ರಾಜನ ತೊಡೆಯನ್ನೇರಿ ಕುಳಿತುಕೊಂಡಾಗ ಸುರುಚಿಯು ಅಸೂಯಾಗ್ರಸ್ತ

## ತಿರುಮಲೆ ತಿರುಪತಿ ದೇವಸ್ಥಾನಗಳು ತಿರುಪತಿ

# ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ

**ಎನ್. ರಮೇಶ್‌ಕುಮಾರ್,** ಐ.ಎ.ಎಸ್.,

ಕಾರ್ಯನಿರ್ವಹಣಾಧಿಕಾರಿ.

ಪ್ರಿಯ ಭಕ್ತ ಬಂಧುಗಳೆ;

ಅನ್ನದಾನಕ್ಕಿಂತ ಇನ್ನು ಚೆನ್ನಾದ ಉನ್ನತವಾದ ದಾನ ಮತ್ತೊಂದಿಲ್ಲ. ಹಸಿದು ಬಂದವರಿಗಶನವೀಯುವುದು ನಮ್ಮದೇಶದಲ್ಲಿ ಒಂದು ಸೇವೆ ಮಾತ್ರವೇ ಅಲ್ಲ; ವೇದ ಕಾಲದಿಂದ ಆಚರಣೆಯಲ್ಲಿರುವ ಪರಂಪರಾಗತ ಧರ್ಮವೂ ಆಗಿದೆ. ಆಹಾರವನ್ನು ನೀಡುವವರು ದೇವತೆಗಳೊಡನೆ ಸ್ಥಾನ ಪಡೆಯುವರೆಂದು ಹೇಳಲಾಗಿದೆ.

ತಿರುಮಲೆ ಯಾತ್ರಿಕಗರಿಗೆ ಉಚಿತವಾಗಿ ಹಾಗೂ ಪೂರ್ಣವಾಗಿ ಭೋಜನ ನೀಡುವ ಉದ್ದೇಶದಿಂದ 1985 ರಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳಿಂದ ಆರಂಭಿಸಲ್ಪಟ್ಟ ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನಯೋಜನೆಯು ಶೋಭಾಕರವಾದ ಯಶಸ್ಸು ಪಡೆದಿದೆ. ಭಾರತಾದ್ಯಂತದ ದಾನಿಗಳಿಂದ ಈ ಯೋಜನೆಯ ಬಗ್ಗೆ ಅತ್ಯುತ್ಸಾಹ ಕಂಡು ಬರುತ್ತಿದೆ.

ಭೋಜನದ ಗುಣಮಟ್ಟವೂ, ಉತ್ಕೃಷ್ಟತೆಯೂ, ಸಾರ್ವಜನಿಕರ ಶ್ಲಾಘನೆಗೆ ಪಾತ್ರವಾಗಿದೆ. ಈ ವಿಶಿಷ್ಟವಾದ ಅನ್ನದಾನಯೋಜನೆಯ ಸಂತಸಕರ ಫಲವನ್ನು ತಿರುಮಲೆಯ ಬಹುತೇಕ ಯಾತ್ರಿಕರು ಹೊಂದುತ್ತಿದ್ದಾರೆ.

ನಿತ್ಯ ಅನ್ನದಾನಯೋಜನೆಯಲ್ಲಿ, ಶ್ರೀ ಸಾಮಾನ್ಯ ಭಕ್ತರೂ ತಮ್ಮ ಯಥಾ ಶಕ್ತಿ ವಂತಿಗೆಯನ್ನು ಸಲ್ಲಿಸುವುದರ ಮೂಲಕ, ಪಾಲುಗೊಳ್ಳುವಂತೆ ಮಾಡಬೇಕೆಂದು ಯೋಚಿಸಿ, ಈ ವಂತಿಗೆಯ ಮೊತ್ತವನ್ನು ಸಾಕಷ್ಟು ಕಡಿಮೆ ಮಾಡಲು ತಿ. ತಿ. ದೇವ ಸ್ಥಾನಗಳು ಈಚೆಗೆ ನಿರ್ಧರಿಸಿವೆ. ತಾವು ರೂ. 1000/- ಅಥವಾ ಗುಣಕಗಳಲ್ಲಿ ದಾನ ಮಾಡಿದರೂ ಸಾಕು; ಉನ್ನತ ಹಾಗೂ ಅರ್ಹವಾದ ಕಾರ್ಯದಲ್ಲಿ ನೆರವು ನೀಡಿದಂತಾಗಿ ಆ ಮೂಲಕ ಕಾಲಾತೀತ ಪರಂಪರೆಯಾದ ಅನ್ನದಾನಯೋಜನೆಯನ್ನು ತಿ.ತಿ.ದೇ. ಉಳಿಸಿಕೊಂಡು ಮುಂದುವರೆಯುವಂತೆ ಮಾಡಿದವರಾಗುತ್ತೀರಿ.

ದೂರದೂರುಗಳಿಂದ ತಿರುಮಲೆಗೆ ಆಗಮಿಸುವ ಯಾತ್ರಿಕರ ಬಗ್ಗೆ ತಮ್ಮ ಹೃದಯ ಸಹಾನುಭೂತಿಯಿಂದ ಆರ್ದ್ರವಾಗುವಲ್ಲಿ, ಪರಿಷ್ಕೃತವಾದ ನಿತ್ಯ ಅನ್ನದಾನಯೋಜನೆಯಲ್ಲಿ ಸೇರಿ, ಈ ಪವಿತ್ರ ಸೇವೆಯಲ್ಲಿ ಭಾಗಿಗಳಾಗಿರಿ.

ಅನ್ನೇಶ್ರಿತಾನಿ ಭೂತಾನಿ ಅನ್ನಂ ಪ್ರಾಣಮಿತಿ ಶ್ರುತಿಃ
ತಸ್ಮಾದನ್ನಂ ಪ್ರದಾತವ್ಯಂ ಅನ್ನಂ ಹಿ ಪರಮಂ ಹವಿಃ

--ಬೋಧಾಯನ ಧರ್ಮಸೂತ್ರ.

ಒಳಶಕ್ತಿಯ ಜೀವಸತ್ವ ಆಹಾರ ಎಂದು ವೇದಗಳು ಘೋಷಿಸುತ್ತಿವೆ. ಅನ್ನದಾನ, ಭೌತಿಕ ಗುಣಗಳನ್ನು ಮೀರಿ ನಿಲ್ಲುವ ಅಮೂಲ್ಯ ಕ್ರಮವಾಗಿದೆ. ಹಾಗಾಗಿ ಅನ್ನದಾನ ಮಾಡಬೇಕು.

ವಂದನೆಗಳೊಡನೆ ತಮ್ಮ ವಿಶ್ವಾಸಿ,

**ಎನ್. ರಮೇಶ್‌ಕುಮಾರ್**

ಳಾಗಿ ನಿನಗೆ ರಾಜಪಟ್ಟವನ್ನೇರುವ ಯೋಗ್ಯತೆ ಇಲ್ಲ ಎಂದು ಬಯ್ದಳು. ಹೀಗಾಗಿ ಅಪಮಾನಿತನಾದ ಧ್ರುವನು ಯಾರಿಗೂ ಹೇಳದೆ ಕೇಳದೆ ಕಾಡಿಗೆ ಹೋದನು. ದಾರಿಯಲ್ಲಿ ನಾರದರು ಧ್ರುವನಿಗೆ ಭೇಟಿಯಾಗಿ ವಿಷ್ಣುವಿನ ೧೨ ಅಕ್ಷರ ಮಂತ್ರ ಜಪವನ್ನು ಹೇಳಿಕೊಟ್ಟರು. ಈ ಮಂತ್ರ ಬಲದಿಂದ ಧ್ರುವನಿಗೆ ನಾರಾಯಣನು ಪ್ರತ್ಯಕ್ಷ ದರ್ಶನ ನೀಡಿ ಅಕ್ಷರವಾದ ಪದವಿಯನ್ನು ದಯಪಾಲಿಸಿದನು.

ಇಂದ್ರಪ್ರಸ್ಥವನ್ನಾಳುತ್ತಿದ್ದ ಧರ್ಮರಾಜನಿಗೆ ನಾರದರು ರಾಜ್ಯಭಾರದ ಕುರಿತು ಮಾಡಿದ ಉಪದೇಶ ಮಹತ್ವದಾಯಕವಾಗಿದೆ. ಅರಣ್ಯವಾಸದ ಅವಧಿಯಲ್ಲಿ ಮನಶ್ಶಾಂತಿಗಾಗಿ ಹೇಳಿದ ಅನೇಕ ಕಥೆಗಳು ತುಂಬಾ ನೀತಿ ಬೋಧಕವಾಗಿವೆ. ಬಾಣದ ಮಂಚದಲ್ಲಿ ಮಲಗಿದ್ದ ಭೀಷ್ಮನಿಂದ ಪಾಂಡವರಿಗೆ ನಾರದರೇ ಉಪದೇಶ ಲಭಿಸುವಂತೆ ಮಾಡಿದ್ದಾರೆ. ಪುತ್ರ ಶೋಕದಿಂದ ವಿಹ್ವಲಗೊಂಡ ಧೃತರಾಷ್ಟ್ರನಿಗೆ ತಪಗೈದು ಶಾಂತಿಯ ದಾರಿಯನ್ನು ಹೊಂದಲು ನಾರದರು ತೋರಿಸಿದ್ದಾರೆ.

ದೇವತೆಗಳ ವೈರಿ ಹಿರಣ್ಯಕಶ್ಯಪುವಿನ ಪತ್ನಿ ಗರ್ಭಿಣಿಯಾದಾಗ ಶಿಶುವನ್ನು ಇಂದ್ರನು ಕೊಲ್ಲಲು ಪ್ರಯತ್ನಿಸಿದಾಗ ನಾರದರು ಇಂದ್ರನಿಗೆ ತಿಳಿಸಿ ಹೇಳಿ ಭ್ರೂಣಹತ್ಯ ಪಾಪ ತಪ್ಪಿಸಿದರು. ಕಯಾದುವನ್ನು ತನ್ನ ಆಶ್ರಮಕ್ಕೆ ಒಯ್ದು ಅವಳಿಗೆ ದಿನ ದಿನವೂ ಧಾರ್ಮಿಕ ಉಪದೇಶ ನೀಡಿದರು. ಹೀಗಾಗಿ ಕಯಾದುವು ಭಾಗವತೋತ್ತಮನಾದ ಪ್ರಹ್ಲಾದನನ್ನು ಹಡೆಯಲು ಕಾರಣವಾಯಿತು.

ಮದ್ರದೇಶದ ರಾಜ ಅಶ್ವಪತಿಯ ಮಗಳು ಸಾವಿತ್ರಿಯು ಸತ್ಯವಾನನನ್ನು ಮದುವೆಯಾಗಲು ನಿಶ್ಚಯಿಸಿದಳು. ನಾರದರು ಅಲ್ಲಿಗೆ ಬಂದು ಸತ್ಯವಾನನ ಆಯುಷ್ಯ ಮದುವೆಯ ನಂತರ ಒಂದು ವರ್ಷ ಮಾತ್ರ ಎಂದು ತಿಳಿಸಿದಾಗ ಆಶ್ವಪತಿಯು ಹೆದರಿ ಬೇರೊಬ್ಬನೊಡನೆ ಮದುವೆಗೆ ಯೋಚಿಸಹತ್ತಿದಾಗ ನಾರದರು 'ಸತ್ಯವಾನನಿಗೆ ನಿನ್ನ ಮಗಳನ್ನು ಕೊಡುವುದು ಉತ್ತಮ. ಭಗವಂತ ಇದ್ದಾನೆ' ಎಂದರು. ಸತ್ಯವಾನನು ವಿಧಿನಿಯಮದಂತೆ ಮರಣಹೊಂದಿದಾಗ ಸಾವಿತ್ರಿಯು ಯಮನೊಡನೆ ಮಾತಿನಲ್ಲಿ ಗೆದ್ದು ಪತಿಭಕ್ತಿಯ ಬಲದಿಂದ ಪತಿಭಾಗ್ಯ ಪಡೆದುಕೊಂಡಳು. ದುಷ್ಟರಿಗೆ ಬೇಗ ಶಿಕ್ಷೆ ಶಿಷ್ಟರಿಗೆ ರಕ್ಷೆ ಭಗವಂತ ನಾಮಸ್ಮರಣೆ ಇವು ನಾರದರ ಬಾಳಿನ ಉದ್ದೇಶಗಳಾಗಿವೆ.



(ಹಿಂದಿನ ಸಂಚಿಕೆಯಿಂದ)

# ಶ್ರೀ ವೆಂಕಟೇಶ್ವರ ಸ್ವಾಮಿ ಆಲಯ

# ಐತಿಹಾಸಿಕ ಹಿನ್ನೆಲೆ

ಮೂಲ : ಡಾ|| ಎನ್. ರಮೇಶನ್.
ಅನುವಾದ : ಬಿ. ಎನ್. ಶ್ರೀನಿವಾಸನ್.

## ಪ್ರಾಗೈತಿಹಾಸ :

ಮನುಷ್ಯ ತನ್ನ ಅವಸರದ ಆಯುಧಗಳಾಗಿ, ಕಲ್ಲುಗಳನ್ನು ತಕ್ಕ ಆಕಾರ, ಗಾತ್ರಗಳಿಗೆ ತಕ್ಕ ರೀತಿಯಲ್ಲಿ ಸಿಗುರೆಬ್ಬಿಸಿ ಸಿದ್ಧಮಾಡಿಕೊಂಡ ಪ್ರಾಚೀನ ಶಿಲಾಯುಗವು ತಿರುಪತಿ, ಸೀತಾರಾಮಪೇಟೆ, ಎಲ್ಲಂಪಲ್ಲಿ, ಮೇಕಲವಾಂಡ್ಲಪಲ್ಲಿ, ಪೀಲೇರು, ಗಟ್ಟು, ಪ್ರಾಂತದಲ್ಲಿ ದೊರೆತಿರುವ ಕೈಕೊಡಲಿಗಳಿಂದ ಪ್ರತಿನಿಧಿಸಲ್ಪಟ್ಟಿದೆ. ಅಗ್ರಹಾರ, ಅರವಂದರಪಲ್ಲಿ, ಚೆಂತಲಪರ್ತಿ, ಮರತವಂದಲಪಲ್ಲಿ ತಿರುಪತಿಗಳಲ್ಲಿ ದೊರೆತ ಬೆಣಚುಕಲ್ಲು ಉಪಕರಣಗಳಿಂದ ಮೇಲೆ ಹೇಳಿದ ಯುಗದ ಮುಂದಿನ ಘಟ್ಟವಾದ ಮಧ್ಯಕಾಲೀನ ಶಿಲಾಯುಗ ಪ್ರತಿನಿಧಿತವಾಗಿದೆ. ನೂತನ ಶಿಲಾಯುಗದ ಯಾವುದೇ ಗುರುತುಗಳೂ ಸಧ್ಯಕ್ಕೆ ಉಪಲಬ್ಧವಿಲ್ಲ.

ಇತಿಹಾಸದ ಆರಂಭಕಾಲ : ೧. ಮೌರ್ಯಕಾಲ, ೨. ಶಾತವಾಹನರ ಕಾಲ.

ಪ್ರಾಗೈತಿಹಾಸಿಕ ಹಾಗೂ ಇತಿಹಾಸದ ಆರಂಭಕಾಲಗಳ ನಡುವೆ ಹಿರಿದಾದ ಕಂದಕವೊಂದಿದ್ದು, ಇತಿಹಾಸದ ಆರಂಭಕಾಲದಲ್ಲಿನ ತಿರುಪತಿಗೆ ಸಂಬಂಧಿಸಿದ ಯಾವುದೇ ಅಂಶವೂ ಬೆಳಕಿಗೆ ಬಂದಿಲ್ಲ. ಆದರೂ ಎಲ್ಲ ಕಡೆಯಲ್ಲಿಯಂತೆ ನಂದರನ್ನು ಮೂಲೆಗುಂಪಾಗಿಸಿ ಮೇಲೆದ್ದ ಮೌರ್ಯರ ನಂತರ ನಾಲ್ಕು ನೂರು ವರ್ಷಗಳ ಕಾಲ ಆಳಿದ ಶಾತವಾಹನರ ಕೈಗೆ ಚಿತ್ತೂರು ಜಿಲ್ಲೆಯೂ ಸೇರಿದ ಈ ಪ್ರಾಂತವೂ ಸೇರಿತ್ತು.

## ಪಲ್ಲವರು :

ಶಾತವಾಹನರ ನಂತರ ಪ್ರಾಕೃತ ಲಕ್ಷಣದ ಹಾಗೂ ಸಂಸ್ಕೃತ ಲಕ್ಷಣದ ಪ್ರಧಾನ ಪಲ್ಲವರ ಆಳ್ವಿಕೆಗೆ ಈ ನಾಡು ಒಳಗಾಯಿತು. ಪ್ರಾಕೃತ ಪಲ್ಲವರ ಸ್ಕಂದವರ್ಮನ ಕಾಲದಲ್ಲಿ ಆತನ ರಾಜ್ಯ ಉತ್ತರದಲ್ಲಿ ಕೃಷ್ಣಾನದಿಯವರೆಗೆ ಪಶ್ಚಿಮದಲ್ಲಿ ಅರಬ್ಬೀ ಸಮುದ್ರದವರೆಗೆ ಹರಡಿದ್ದಿತು. ಕ್ರಿ.ಶ. ನಾಲ್ಕನೇ ಶತಕದ ಮಧ್ಯದಲ್ಲಿ ಸಮುದ್ರಗುಪ್ತನು ದಕ್ಷಿಣ ಜೈತಯಾತ್ರೆ ಬಂದಾಗ, ಕಂಚಿಯ ಬಳಿ ಪಲ್ಲವ ರಾಜ ವಿಷ್ಣುಗೋಪನನ್ನು ಸೋಲಿಸಿದಾಗ ಚಿತ್ತೂರು ಜಿಲ್ಲೆಯ ಭಾಗ ಅವರ ಕೈತಪ್ಪಿತು. ಪಲ್ಲವರು ಮತ್ತೆ ಈ ಭಾಗದ ಪ್ರಭುಗಳಾದರೂ ತ್ರಿಲೋಚನ ಪಲ್ಲವನಕಾಲದಲ್ಲಿ ಈ ಪ್ರಾಂತ ಕರಿಕಾಲಚೋಳನ ವಶಕ್ಕೆ ಬಂದಿತು. ನಂತರ ಕ್ರಿ.ಶ. ೫೭೦ ರಿಂದ ಕ್ರಿ.ಶ. ೫೮೦ ವರೆಗೆ ಆಳಿದ ಸಿಂಹವಿಷ್ಣುವಿನಿಂದಾಗಿ ಈ ಪ್ರಾಂತ್ಯದ ಮೇಲಿನ ಪಲ್ಲವಾಧಿಕಾರ ಮತ್ತೆ ಸ್ಥಾಪಿತವಾಯಿತು.

ಈ ಪ್ರಾಂತ್ಯದ ಮುಖ್ಯ ಭಾಗ ಪಲ್ಲವ ರಾಜ್ಯದ ಈಶಾನ್ಯದ ಗಡಿಯಲ್ಲಿ ಬಾದಾಮಿಚಾಲುಕ್ಯರ ರಾಜ್ಯದ ಗಡಿಯೊಡನೆ ಹೊಂದಿಕೊಂಡದ್ದರಿಂದಾಗಿ, ಸ್ಪರ್ಧೆ ನಿರಂತರವಾಗಿದ್ದಿತು. ಪಶ್ಚಿಮದ ಚಾಲುಕ್ಯರ ಎರಡನೇ ಪುಲಿಕೇಶಿಗೆ ಇಲ್ಲಿನ ಬಹುಭಾಗವನ್ನು ಮಹೇಂದ್ರವರ್ಮ ಪಲ್ಲವ ಕಳೆದುಕೊಂಡ

ತಿರುಪತಿ - ತಿರುಮಲೆ ಪ್ರಾಂತ್ಯವೂ ಅದನ್ನು ಒಳಗೊಂಡ ತೊಂಡಮಂಡಲ ಪ್ರಾಂತ್ಯದ ಇತಿಹಾಸದಲ್ಲಿ ಪಲ್ಲವರ ಕಾಲ ಪ್ರಥಮ ಪ್ರಧಾನಕಾಲವಾಗಿದೆ. ಈ ಪಲ್ಲವರು ಮೊದಲಿಗೆ ಶಾತವಾಹನರ ರಾಜ್ಯದ ದಕ್ಷಿಣದ ತೊಂಡಮಂಡಲ ನಾಡಿನಲ್ಲಿದ್ದವರು. ಈ ವಂಶದ ಮೊದಲಿಗನಾದ ಸಿಂಹವರ್ಮನು (ವೀರಕುರುಚ) ವನವಾಸಿಯ ನಾಗವಂಶಕ್ಕೆ ಸೇರಿದ ರಾಜಕುಮಾರಿಯೊಬ್ಬಳನ್ನು ವಿವಾಹವಾಗಿ ಬಳುವಳಿಯಾಗಿ ರಾಜ ಪದವಿಯನ್ನು ರಾಜ ಮರ್ಯಾದೆಯನ್ನೂ ಪಡೆದ. ಅಂದಿನ ಕಾಲದಲ್ಲಿನ ಪ್ರಭಾವಶಾಲಿ ನಾಗವಂಶದ ಅಳಿಯನಾಗಿದ್ದುದರಿಂದ ಪ್ರಾಯಶಃ ತೊಂಡಮಂಡಲದ ಇತರ ನಾಗಸಂತತಿಗಳವರಿಂದ ನಾಯಕನೆಂದು ಗುರುತಿ



ಸಲ್ಪಟ್ಟಿರಬೇಕು. ನಂತರ ಈತ ತೀರಪ್ರದೇಶಗಳನ್ನು ಆಕ್ರಮಿಸಿ, ನೆಲ್ಲೂರು, ಗುಂಟೂರು ಮತ್ತಿತರ ರಾಯಲಸೀಮೆಯ ಜಿಲ್ಲೆಗಳನ್ನು ವಶಪಡಿಸಿಕೊಂಡ. ಪ್ರಾಚೀನ ಕಂಚಿಯನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಅದರ ಖ್ಯಾತಿಯನ್ನು ಪುನರುದ್ಧರಿಸಿದ. ಆತ ಕಟ್ಟಿ ಬೆಳಸಿದ ಈ ರಾಜ್ಯ ಬಹುಕಾಲ ನಿಂತು ಅವನ ವಂಶಸ್ಥರಿಂದ ಕ್ರಿ.ಶ. ೯ನೇ ಶತಕದ ವರೆಗೆ ಆಳಲ್ಪಟ್ಟಿತು. ನಂತರ ಚೋಳರಿಂದ ಆಕ್ರಮಿಸಲ್ಪಟ್ಟಿತು.

ಈ ಭಾಗದ ಪಲ್ಲವ ವಂಶದ ಬಗ್ಗೆ ಕಡೆಯ ಮೂವರಲ್ಲಿ ಮೊದಲಿಗನಾದ ರಾಜನ ಎರಡು ಶಾಸನಗಳಿವೆ. (೨೧೯ ಹಾಗೂ ೨೨೩ ಜಿ.ಟಿ.) ಈ ರಾಜನು ಕೋವಿಜಯದಂತಿ ವಿಕ್ರಮರ್ ಎಂದು ಹೆಸರಿಸಲ್ಪಟ್ಟು ಕ್ರಿ.ಶ. ೭೭೫ ರಿಂದ ೮೨೬ ರವರೆಗೆ ಆಳಿದ ದಂತಿ ವರ್ಮನೆಂದು ಗುರುತಿಸಲಾಗಿದೆ. ಈ ಶಾಸನಗಳು ವೇಂಗಡದ ಆಲಯಕ್ಕೆ ನೀಡಿದ ಕಾಣಿಕೆಗಳನ್ನಲ್ಲದೆ - ತಿರುಚಾನೂರಿನಲ್ಲಿದ್ದ ಅದರ ಪ್ರತಿನಿಧಿಯಾದ ಇನ್ನೊಂದು ಆಲಯಕ್ಕೆ ನೀಡಿದ ಕಾಣಿಕೆಯನ್ನು ಸೂಚಿಸುತ್ತವೆ.

ಈ ಪ್ರಾಂತ್ಯವು ಪಲ್ಲವರ ಸಾಮಂತರಾದ ಬಾಣರ ಆಳ್ವಿಕೆಗೆ ಸೇರಿದ್ದಿತು. ಬಾಣರ ವಿಜಯಾದಿತ್ಯನು ಎರಡು ಶಾಸನಗಳಲ್ಲಿ ಹೆಸರಿಸಲ್ಪಟ್ಟಿದ್ದಾನೆ. (ಜಿಟಿ ೪೨೯, ೨೨೯) ಈ ವಿಜಯಾದಿತ್ಯನು. ಕ್ರಿ.ಶ. ಒಂಭತ್ತನೇ ಶತಕದ ಮೊದಲರ್ಧದಲ್ಲಿ ಪ್ರಸಿದ್ಧನಾಗಿರಬೇಕು. ಪಲ್ಲವರ ಎರಡು ತಲೆಮಾರಿನ ನಂತರ ತೊಂಡಮಂಡಲವನ್ನು ಚೋಳರ ಆದಿತ್ಯ-೧, ಆಕ್ರಮಿಸಿ ಪಲ್ಲವರ ರಾಜ ಅಪರಾಜಿತನನ್ನು ಸೋಲಿಸಿ ಈ ಭಾಗವನ್ನು ವಶಪಡಿಸಿಕೊಂಡ. ಇದರಿಂದಾಗಿ ಪಲ್ಲವರ ಆಧಿಪತ್ಯ ಕೊನೆಗೊಂಡಿತು.

ಕರಿಕಾಲಚೋಳನ ವಂಶಸ್ಥರೆಂದು ಹೇಳಿಕೊಂಡ ಚೋಳರ ಒಂದು ಶಾಖೆಯ ಅಧೀನದಲ್ಲಿ ಈ ಪ್ರಾಂತ್ಯ ಬಾದಾಮಿ ಚಾಲುಕ್ಯರ, ಕಂಚಿಯ ಪಲ್ಲವರ ಕಾಲದಲ್ಲಿ ಇದ್ದುದಾಗಿ ತಿಳಿದುಬರುತ್ತದೆ. ಇವರ ರಾಜರನ್ನು ಕಡಪ ಜಿಲ್ಲೆಯ ರೇನಾಡು - ೭೦೦೦ ದ ಹೆಸರಿನಲ್ಲಿ ರೇನಾಡು ಚೋಳರೆಂದು ಕರೆಯಲಾಯಿತು. ಇವರಲ್ಲಿ ಚೋಳ ಮಹಾರಾಜ - ಬಿರುದು ಪಡೆದ ಮಹೇಂದ್ರ ವಿಕ್ರಮನ ಹಾಗೂ ಅವನ ಮಗ ಪುಣ್ಯಕುಮಾರರ ಶಾಸನಗಳು ಈ ಜಿಲ್ಲೆಯಲ್ಲಿ ದೊರೆತಿವೆ.

ಬಾದಾಮಿಯ ಚಾಲುಕ್ಯರನ್ನು ಕ್ರಿ.ಶ. ೭೫೭ ರಲ್ಲಿ ಅವರ ಸಾಮಂತರಾದ ರಾಷ್ಟ್ರಕೂಟರು ಉಚ್ಚಾಟಿಸಿದರು. ಕ್ರಿ.ಶ. ಒಂಬತ್ತನೇ ಶತಕದ ಕೊನೆಯಲ್ಲಿ ಪಲ್ಲವರು ಪಾಂಡ್ಯರ ಏಳ್ಗೆಯನ್ನು ಎದುರಿಸಬೇಕಾಯಿತು. ಪ್ರಾಯಶಃ ಕೆಲಕಾಲವಾದರೂ ಪಲ್ಲವರಿಗೆ ಪಾಂಡ್ಯರ ವಿರುದ್ಧ ರಾಷ್ಟ್ರಕೂಟರು ನೆರವು ನೀಡಿರಬೇಕು. ಈ ಕಾಲಕ್ಕೆ ದಕ್ಷಿಣಭಾರತದಲ್ಲಿ ಚೋಳ ಸಾಮ್ರಾಜ್ಯ ತಲೆಯೆತ್ತಿ ನಿಂತಿತು. ಈ ವಂಶಾವಳಿಗಳು ಚಿತ್ತೂರು ಜಿಲ್ಲೆಯ ಮೇಲೆ ಸಾಕಷ್ಟು ಪ್ರಭಾವ ಬೀರುವಂತಾಯಿತು. ಇವರ ಸಾಮಂತರಾದ ಬಾಣರು, ನೊಳಂಬರು, ಪಶ್ಚಿಮಗಂಗರು, ವೈದುಂಬರು ತಮ್ಮತಮ್ಮಲ್ಲಿ ಆಧಿಕ್ಯತೆಗಾಗಿ ಹೊಡೆದಾಡುತ್ತಿದ್ದುದರಿಂದಾಗಿ ಚಿತ್ತೂರುಜಿಲ್ಲೆ ಈ ವಂಶಗಳ ಒಳಜಗಳಗಳಲ್ಲಿ ಆಗಾಗ ಕೈ ಬದಲಾಯಿಸುತ್ತ ಹೋಯಿತು.

ಏನೇ ಆದರೂ ಹಿಂದೆಯೇ ಹೇಳಿದಂತೆ ಚೋಳ ರಾಜ ಆದಿತ್ಯ - ೧ (ಕ್ರಿ.ಶ. ೮೭೧ - ೯೦೭) ಪಲ್ಲವರ ಅಪರಾಜಿತನನ್ನು ಸೋಲಿಸಿದಾಗ ಈ ಪ್ರಾಂತ್ಯದಲ್ಲಿ ಪಲ್ಲವರ ಆಳ್ವಿಕೆ ಕೊನೆಯಾಗಿ ಇದು ಚೋಳ ಸಾಮ್ರಾಜ್ಯದ ತೊಂಡಮಂಡಲಕ್ಕೆ ಸೇರಿ ಹೋಯಿತು. ಈ ಜಿಲ್ಲೆಯ ಶ್ರೀಕಾಳಹಸ್ತಿಯಲ್ಲಿ ಮರಣ ಹೊಂದುವುದಕ್ಕೆ ಮೊದಲು ಆದಿತ್ಯನು ಬಹುಭೂಭಾಗವನ್ನು ತನ್ನ ರಾಜ್ಯಕ್ಕೆ ಸೇರಿಸಿಕೊಂಡ. ಹೀಗಾಗಿ ಇವನ ಮಗ ಪರಾಂತಕ - ೧ (ಕ್ರಿ.ಶ. ೯೦೭ - ೯೫೫) ಪಟ್ಟಾಭಿಷಿಕ್ತನಾದಾಗ ಚೋಳ ಸಾಮ್ರಾಜ್ಯ ಉತ್ತರದಲ್ಲಿ ಶ್ರೀಕಾಳಹಸ್ತಿಯಿಂದ ಮದರಾಸಿನವರೆಗೂ ದಕ್ಷಿಣದಲ್ಲಿ ಕಾವೇರಿಯವರೆಗೂ ವಿಸ್ತರಿಸಿದ್ದಿತು. ಕ್ರಿ.ಶ. ೯೧೯-೯೧೬ರ ಮಧ್ಯಕಾಲದಲ್ಲಿ ಪರಾಂತಕ - ೧ ನು ವೈದುಂಬರನ್ನೂ ವಿಕ್ರಮಾದಿತ್ಯ - II ಹಾಗೂ ವಿಜಯಾದಿತ್ಯ III ಎಂಬ ಬಾಣ ದೊರೆಗಳನ್ನೂ ಸೋಲಿಸಿ, ಪೆರುಂಬಾಣಪ್ಪಾಡಿ ವರೆಗೆ ವಿಸ್ತೃತವಾಗಿದ್ದ ಅವರ ರಾಜ್ಯವನ್ನು - ಪಾಲಾರ್ ನದಿಯ ಉತ್ತರಕ್ಕೆ - ಪಶ್ಚಿಮದಲ್ಲಿ ಪುಂಗನೂರಿನವರೆಗೆ ಹಾಗೂ - ಪೂರ್ವದಲ್ಲಿ ಶ್ರೀಕಾಳಹಸ್ತಿಯವರೆಗೆ ಇದ್ದ ರಾಜ್ಯವನ್ನು - ವಶಪಡಿಸಿಕೊಂಡ. ಇದರಿಂದಾಗಿ ವೈದುಂಬ ಬಾಣ ದೊರೆಗಳು ಚೋಳರ ಆಕ್ರಮಣಕ್ಕೆ ವಿರುದ್ಧವಾದ ರಾಷ್ಟ್ರಕೂಟದ ಕೃಷ್ಣ - III ನನ್ನು ಆಶ್ರಯಿಸುವಂತಾಯಿತು. ಹಲವಾರು ಸಾಮಂತರ ಸೇನಾಧಿಪತಿಗಳ ನೆರವಿನಿಂದ ಮೂರನೇ ಕೃಷ್ಣನು ಚೋಳರ ಮೇಲೆ ದಂಡೆತ್ತಿ ನಡೆದದ್ದರಿಂದ ಪರಾಂತಕನಿಗೆ ಹಲವಾರು ಪ್ರದೇಶಗಳು ಕೈಬಿಟ್ಟು ಹೋದವು. ಈ ಜಿಲ್ಲೆಯಲ್ಲಿರುವ ಹಲವಾರು ಶಾಸನಗಳು ಪರಾಂತಕನ ಆಳ್ವಿಕೆಯ ಕೊನೆಗಾಲದವು. ಉದಾಹರಣೆಗಾಗಿ ಒಂದು ಎಂದರೆ ಕ್ರಿ.ಶ. ೯೫೫ ರ ಪುಂಗನೂರಿನ ವನಮಲವಿನ್ನೆಯಲ್ಲಿ ದೊರೆತಿರುವ ಈತನ ಆಳ್ವಿಕೆಯ ೪೮ನೇ ವರ್ಷದ್ದು.

ಕೃಷ್ಣ - III ಶತ್ರುರಾಜ್ಯದಲ್ಲಿ ಬಹುಕಾಲ ಇರಲಿಲ್ಲವಾದರೂ ತನ್ನ ದೀರ್ಘ ಆಡಳಿತಕಾಲದಲ್ಲಿ ಆಕ್ರಮಿತ ತೊಂಡಮಂಡಲದ ಆಳ್ವಿಕೆಯನ್ನು ನೋಡಿಕೊಳ್ಳಲು ಜನರನ್ನು ನಿಯಮಿಸಿ ತನ್ನ ಅಧೀನದಲ್ಲಿಯೇ ಇಟ್ಟುಕೊಂಡ. ಹೀಗೆ ಈ ಜಿಲ್ಲೆಯು ಪುಲಿನಾಡಿನ ಆಳ್ವಿಕೆ ವಿಜಯದೇವನಿಗೆ ಒಪ್ಪಿಸಲಾಯಿತು. ಮೂರನೇ ಕೃಷ್ಣನ ಕಾಲಕ್ಕೆ ಸೇರಿದ ಹಲವಾರು ಶಾಸನಗಳು ದೊರೆತಿವೆ. ಅವನ ನಂತರ ಉಂಟಾದ ಗೊಂದಲಕರವಾದ ಪರಿಸ್ಥಿತಿಯಲ್ಲಿ ವಿಜಯದೇವ ಅಥವಾ ವಜ್ಜರದೇವನು ದಂಗೆಯೆದ್ದಿರಬೇಕು. ಕಾರಣ ಪುಂಗನೂರಿನ ದೋದಿನಾಯನ ಪಲ್ಲಿಯ ಒಂದು ಶಾಸನ ಇವನನ್ನು ಭೂಮಂಡಲವನ್ನು ಆಳುವವನೆಂದು ಕರೆದಿದೆ. ಆದರೆ ಇವನ ದಂಗೆಯನ್ನು ಅಡಗಿಸಲಾಯಿತು.

ಕೃಷ್ಣ - III ನಿಗೆ ಕಳೆದುಕೊಂಡ ಭೂಮಿಯನ್ನು ಮರಳಿಪಡೆಯಲು ಕ್ರಿ.ಶ. ೯೪೯ - ೯೫೭ ರವರೆಗಿದ್ದ ಚೋಳರಾಜ ಗಾಂಧಾರಾದಿತ್ಯನು ಪ್ರಯತ್ನಿಸಿದರೂ ಫಲಕಾಣಲಿಲ್ಲ - ಅವನ ಮಗ ಅರಿಂಜಯನೂ, ಅವನ ಮಗ ಪರಾಂತಕ - II ನೂ ಈ ಪ್ರಯತ್ನಗಳನ್ನು ಮುಂದುವರಿಸಿದರು. ಚೋಳರ ಪ್ರಯತ್ನಗಳಿಗೆ - ವಿಶೇಷವಾಗಿ ಪರಾಂತಕ - II ನ ಕಾಲದಲ್ಲಿ ಉತ್ತರದಲ್ಲಿ ಸತ್ಫಲ ಕಂಡುಬಂದು ಅವನ ಮಗ ಉತ್ತಮ ಚೋಳನು (ಕ್ರಿ.ಶ. ೯೭೦-೯೮೫) ಸಿಂಹಾಸನವನ್ನೇರಿದಾಗ ಇಡೀ ತೊಂಡಮಂಡಲವು ರಾಷ್ಟ್ರಕೂಟರಿಂದ ಚೋಳರ ಹಸ್ತಗತವಾಗಿದ್ದಿತು. ಗಾಂಧಾರಾದಿತ್ಯ, ಪರಾಂತಕ - II (ಸುಂದರ ಚೋಳ) ಮಧುರಾಂತಕ ಉತ್ತಮ ಚೋಳರ ಆಳ್ವಿಕೆಯನ್ನು ಸೂಚಿಸುವ ಹಲವು ಶಾಸನಗಳು ಕಂಡುಬಂದಿವೆ.

## ಬಾಣರು :

ಕೋಲಾರ (ಕರ್ನಾಟಕ ರಾಜ್ಯದ್ದು) ವನ್ನೂ ಸೇರಿದಂತೆ ಚಿತ್ತೂರು ಮತ್ತಿತರ ಹತ್ತಿರದ ಜಿಲ್ಲೆಗಳಲ್ಲಿ ಬಾಣರು ಪ್ರಭಾವಶಾಲಿಗಳಾಗಿದ್ದರು. ಇವರು ಪ್ರಮುಖ ಸಾಮಂತ ವಂಶದವರಾಗಿದ್ದರು. ಈ ಜಿಲ್ಲೆಯಲ್ಲಿ ಈ ವಂಶದ ೩೨ ಶಾಸನಗಳನ್ನು ಇದುವರೆಗೆ ಕಂಡುಕೊಳ್ಳಲಾಗಿದೆ. ಇವುಗಳಲ್ಲಿ ೨೨ ರಷ್ಟು ಶಾಸನಗಳು ಪುಂಗನೂರು ಪ್ರಾಂತ್ಯದಲ್ಲಿವೆ. ಆದರೆ ವುಗಳಲ್ಲಿನ ಮಾಹಿತಿಗಳು ದಾಖಲಾಗುವಷ್ಟು ಖಚಿತವಾಗಿಲ್ಲ.

ಪೌರಾಣಿಕ ರಾಕ್ಷಸರ ರಾಜ ಮಹಾಬಲಿಯ ವಂಶಸ್ಥರು ತಾವು ಎಂದು ಬಾಣದೊರೆಗಳು ಹೇಳಿಕೊಂಡರು. ಕ್ರಿ. ಶ. ನಾಲ್ಕನೆಯ ಶತಕದ ಮಧ್ಯ

ದಲ್ಲಿ ಕದಂಬರ ಮುಖ್ಯ ಮಯೂರ ಶರ್ಮನು ಶ್ರೀಶೈಲದ (ಶ್ರೀಪರ್ವತ) ದಟ್ಟವಾದ ಅರಣ್ಯಗಳಲ್ಲಿದ್ದುಕೊಂಡು ಇತರ ರಾಜರಿಂದ - ಬೃಹತ್ ಬಾಣನಿಂದಲೂ - ಕಪ್ಪವನ್ನು ಸ್ವೀಕರಿಸಿದ್ದನು. ಈ ಹೊತ್ತಿಗೆ ಬಾಣರು ಪಲ್ಲವರ ಸಾಮಂತರಾಗಿದ್ದರೆಂದು ತೋರುತ್ತದೆ.

ಬಾಣರಿಂದ ಆಳಲ್ಪಟ್ಟ ಪ್ರಾಂತ್ಯವನ್ನು ಆಂಧ್ರಪಥ ಪಶ್ಚಿಮಕ್ಷಿತಿ ಎಂದರೆ - ಆಂಧ್ರದ ಪಥದಲ್ಲಿನ (ಆಂಧ್ರ ಪಥದ) ಪಶ್ಚಿಮ ಭೂಭಾಗವೆಂದು ಕರೆಯಲಾಗುತ್ತಿತ್ತು. ಇತರ ಹೆಸರುಗಳು ವಡಗುವಲಿ ಮೆರಕು, ವಡಗುವಲಿಮಿನ್ ಮೆರಕು, ವಡಗುವಲಿ ೧೨೦೦೦, ವೆಡುಗವಲಿ ೧೨೦೦೦, ಮನ್ನೆ ೨೦೦೦. ಇದೇ ಬಾಣ ಪ್ರಾಂತ್ಯವನ್ನು ತಮಿಳಿನಲ್ಲಿ ಬಹುಶಃ ಪೆರುಂಬಾಣಪ್ಪಾಡಿ ಎಂದು ಕರೆದಿರಬೇಕು. ಹಿಂದೆಯೇ ಗಮನಿಸಿದಂತೆ ಪೆರುಂಬಾಣಪ್ಪಾಡಿಯು ಪಶ್ಚಿಮದಲ್ಲಿ ಪುಂಗನೂರಿನಿಂದ ಪೂರ್ವಕ್ಕೆ ಶ್ರೀಕಾಳಹಸ್ತಿಯವರೆಗೆ ವಿಸ್ತರಿಸಿದ್ದಿತು. ಪಾಲಾರ್ ನದಿಯ ಇದರ ದಕ್ಷಿಣಗಡಿಯಾಗಿದ್ದಿತು. ಶಾಸನಗಳು ಎಂಟು ಮಂದಿಯನ್ನು - ನಂದಿವರ್ಮ, ವಿಜಯಾದಿತ್ಯ-II - ನ ಎರಡು ಶಾಸನಗಳು ಕ್ರಿ. ಶ. ೮೯೮ ಹಾಗೂ ಕ್ರಿ.ಶ. ೯೦೫ ಕಾಲದ್ದು, ನಮ್ಮನ್ನು ರಾಷ್ಟ್ರಕೂಟರ ಎರಡನೆ ಕೃಷ್ಣನ ಕಾಲಕ್ಕೆ ಒಯ್ಯುತ್ತವೆ. ಈ ಹೊತ್ತಿಗೆ ಪಲ್ಲವರು ಚೋಳ ಸಾಮ್ರಾಜ್ಯಕ್ಕೆ ಎಡೆಮಾಡಿಕೊಟ್ಟಿದ್ದರು. ವಿಜಯಾದಿತ್ಯನ ಮಗಳ ಮಗ ಕನ್ನರದೇವನಿಗೆ - ಅವನ ಮಲಸಹೋದರನಾದ ಪರಾಂತಕ I ಬದಲಿಗೆ ಚೋಳ ಸಿಂಹಾಸನವನ್ನು ದಕ್ಕಿಸಿಕೊಡುವಲ್ಲಿ ರಾಷ್ಟ್ರಕೂಟರ ಎರಡನೆಯ ಕೃಷ್ಣ ವಿಫಲನಾದದ್ದರಿಂದ ಬಾಣರು ಬಹು ತೊಂದರೆಗೊಳಗಾಗಬೇಕಾಯಿತು. ಪರಾಂತಕ - ೧ ನಿಂದ ಆಜ್ಞಪ್ತನಾದ ಪಶ್ಚಿಮ ಗಂಗರ ಎರಡನೇ ಪೃಥ್ವಿಪತಿಯು, ಆಗ ಬಾಣ ಪ್ರಾಂತ್ಯದ ಪ್ರಭುಗಳಾಗಿದ್ದ ವಿಕ್ರಮಾದಿತ್ಯ - II ಹಾಗೂ ವಿಜಯಾದಿತ್ಯ - III ರನ್ನು ಪದಚ್ಯುತಗೊಳಿಸಿದ. ಹೀಗಾಗಿ ಬಾಣರಾಜ್ಯವು ಪರಾಂತಕನ ವಶವಾಯಿತು. ಅವ ತನ್ನ ಆಡಳಿತಾಧಿಕಾರಿಯನ್ನು ನೇಮಿಸಿದ. ಆದರೆ ಬಾಣರ ಪ್ರಾಬಲ್ಯ ಕಡಮೆಯಾಗಲಿಲ್ಲ. ನಂತರದ ಒಬ್ಬ ಬಾಣಮೊರೆ ಕೃಷ್ಣರಾಜನ ನೆಚ್ಚಿನ ಗೆಳೆಯ ಎಂಬ ಬಿರುದನ್ನೂ ಪಡೆದ (ರಾಷ್ಟ್ರಕೂಟ ಕೃಷ್ಣ - ೩ - ಕ್ರಿ.ಶ. ೯೩೯-೯೬೭)

## ವೈದುಂಬರು :

ಇನ್ನೊಂದು ಸ್ಥಳೀಯ ಮನೆತನ ವೈದುಂಬರ ಆಳ್ವಿಕೆಯಲ್ಲೂ ಈ ಪ್ರಾಂತ್ಯವಿದ್ದಿತು. ಅವರ ರಾಜಧಾನಿ - ವೈದುಂಬ ವ್ರೋಲು ಅಥವಾ ವೈದುಂಬನಗರ ಈ ಜಿಲ್ಲೆ[illegible]ತು. ಈ ಮನೆತನದ ಹಲವಾರು ಶಾಸನಗಳು ಚಿತ್ತೂರು, ಕಡಪಜಿಲ್ಲೆಗಳಲ್ಲೂ, ಮೈಸೂರು ರಾಜ್ಯದ ಕೋಲಾರದಲ್ಲೂ ದೊರೆತಿವೆ. ದೊರೆತ ಸುಮಾರು ಇಪ್ಪತ್ತು ಶಾಸನಗಳು ಶಿಲಾಲೇಖ ಶಾಸ್ತ್ರರೀತ್ಯಾ ಕ್ರಿ.ಶ. ೮, ೯, ೧೦ ನೇ ಶತಕಗಳಿಗೆ ಸೇರಿದ್ದು ಬಹು ಕಡಮೆ ವಿವರಗಳನ್ನೊದಗಿಸುತ್ತವೆ. ಬಹುತೇಕವಾದವು ಬರೀ ವೀರಗಲ್ಲುಗಳಾಗಿ, ಯುದ್ಧದಲ್ಲಿ ಅಥವಾ ತುರುಗೋಳ್ ಕಾಳಗದಲ್ಲಿ ಮೃತವೀರರ ನೆನಪಿಗಾಗಿ ಇದವು. ಹೀಗಾಗಿ ಈ ಮನೆತನದ ವಿವರಣೆ ನೀಡುವುದು ಸಾಧ್ಯವಿಲ್ಲ.

ಈ ಪಾಳಯಗಾರರು - ವೀರಕುಲದವರಂತೆ - ಅನೇಕ ಬಾರಿ ತಮ್ಮ ನೆರೆಯ ಲೆಂಕುಳರು, ರೇನಾಡು ಚೋಳರು, ಪೆರುಂಬಾಣಪ್ಪಾಡಿಯ ಬಾಣರು, ನೊಳಂಬವಾಡಿಯ ನೊಳಂಬರುಗಳೊಡನೆ ಯುದ್ಧದಲ್ಲಿ ತೊಡಗಿರುತ್ತಿದ್ದರು. ಮನೆತನದ ಮೊದಲಪುರುಷ ವೈದುಂಬ ಮಹಾರಾಜ. ಅವನು ಇನ್ನೊಂದು ಬುಡಕಟ್ಟಿನ ಲೆಂಕುಳರೊಡನೆ ಯುದ್ಧಮಾಡಿದ. ವೈದುಂಬರ ಸೇನಾಪತಿ ಗಂಡರ ಮುತ್ತುರಾಜ ಯುದ್ಧದಲ್ಲಿ ಮಡಿದ. ಈ ಕಾಲದಲ್ಲಿ ವೈದುಂಬರು ಮದನಪಲ್ಲಿಯ ಚಿಪ್ಪಿಲ್ಲಿಯಲ್ಲಿ ರೇನಾಡು ಚೋಳರನ್ನು ಸೋಲಿಸಿ ಈ ಪ್ರಾಂತ್ಯವನ್ನು ವಶಪಡಿಸಿಕೊಂಡರು. ವೈದುಂಬ ಮಹಾರಾಜನ ನಂತರ ಸಂಕಲಿ ಅಥವಾ ಗಂಡಸಂಕಲಿ ಬಂದಿರಬೇಕು. ಗಂಡ ತ್ರಿನೇತ್ರ ವೈದುಂಬ ಮಹಾರಾಜ ಮನೆತನದ ಮತ್ತೊಬ್ಬರಾಜ. ಈತ ಪ್ರಭಾವಿ ಹಾಗೂ ಮಹತ್ವಾಕಾಂಕ್ಷಿ. ಈತ ಇದ್ದದ್ದು ಹತ್ತನೆಯ ಶತಕವಾದಿಯಲ್ಲಿ, ಎಲ್ಲ ಕಾಲದಲ್ಲೂ ಯುದ್ಧದಲ್ಲಿ ತೊಡಗಿರುತ್ತಿದ್ದ. ತನ್ನ ಆಡಳಿತದ ಮೊದಲಿನಲ್ಲಿಯೇ ಜಾಟ ಚೋಳನನ್ನು ಸೋಲಿಸಿ ರೇನಾಡು ೭೦೦೦ ಅನ್ನು ವಶಪಡಿಸಿಕೊಂಡ. ನೊಳಂಬರೊಡನೆ ಎರಡು ಬಾರಿ - ಮದನಪಲ್ಲಿಯ ಮುದಿವೇಡು - ಮುದುಮುಡುವುನಲ್ಲೂ, ಅನಂತಪುರದ ಸೋರೆಮಡಿಯಲ್ಲೂ ಯುದ್ಧಮಾಡಿದ. ಈ ಯುದ್ಧಗಳಲ್ಲಿ ಜಯಶಾಲಿಯಾಗಿ ಕೋಲಾರ ಜಿಲ್ಲೆಯ ಹಲವು ಭಾಗಗಳನ್ನು ಕೈವಶ ಮಾಡಿಕೊಂಡ. ಈತನ ನಂತರ ಬಂದವನು ಮನುಜ ತ್ರಿನೇತ್ರ ಅಥವಾ ಭುವನ ತ್ರಿನೇತ್ರ. ಮನುಜ ತ್ರಿನೇತ್ರ ಸಿಂಹಾಸನ ವೇರಿದ್ದು ಕ್ರಿ.ಶ. ೯೭೩ ರಲ್ಲಿ. ಈತನ ರಾಜ್ಯವು - ಇಡಿಯಾಗಿ ಅಲ್ಲದಿದ್ದರೂ - ರೇನಾಡು, ಪಾಕನಾಡು, ಮುಲಿಕಿ ನಾಡುಗಳ ಭಾಗಗಳನ್ನಾದರೂ ಒಳಗೊಂಡಿದ್ದಿತು. ಶಾಸನಗಳಿಂದ ತಿಳಿದು ಬರುವ ಇತರ ವೈದುಂಬ ಪ್ರಭುಗಳೆಂದರೆ - ಇರಿಗಯ ಮಹಾರಾಜ, ನನ್ನಿಮರಾಯರ್, (ತುಕ್ಕರೈಯ ಮಗ) ಮಧುರ ಮಹಾರಾಜ ಮತ್ತು ಅವನ ಮಗ ಕಲಿಗ ತ್ರಿನೇತ್ರ ಭೀಮ ಮಹಾರಾಜ.

## ಪಶ್ಚಿಮದ ಗಂಗರು ಹಾಗೂ ನೊಳಂಬ ಪಲ್ಲವರು :

ಈ ಪ್ರಾಂತ್ಯದಲ್ಲಿ ಪ್ರಭಾವಶಾಲಿಯಾಗಿದ್ದ ಮತ್ತೊಂದು ಮನೆತನವೆಂದರೆ ಕ್ರಿ.ಶ. ನಾಲ್ಕನೆಯ ಶತಮಾನದ ಕೊನೆಯಲ್ಲಿ ಆರಂಭವಾದದ್ದು ಎನ್ನಲಾದ ಪಶ್ಚಿಮ ಗಂಗರಸರ ಮನೆತನ. ಇವರು ಪಲ್ಲವರ ಸಾಮಂತರಾಗಿದ್ದರು. ಮನೆತನದ ಮುಖ್ಯನಾದ ಹರಿವರ್ಮ (ಕ್ರಿ. ಶ. ೪೫೦-೪೭೦) ನಿಗೆ ಪಲ್ಲವರಾಜ ಒಂದನೇ ಸಿಂಹವರ್ಮನು, ಈ ಪ್ರಾಂತದ ಬಾಣರ ಹುಟ್ಟಡಗಿಸಲೆಂದು ಪಟ್ಟಕಟ್ಟಿದ. ಪಶ್ಚಿಮ ಗಂಗರ ರಾಜ್ಯವು ಶಿವಮಾರನ ಕಾಲದ ನಂತರ (ಕ್ರಿ. ಶ. ೭೮೮-೮೧೨) ಎರಡು ಭಾಗವಾಗಿ ಅವನ ಮಗ ಮಾರಸಿಂಹ ಹಾಗೂ ತಮ್ಮ ವಿಜಯಾದಿತ್ಯರಲ್ಲಿ ಹಂಚಿ ಹೋಯಿತು. ಪುಂಗನೂರು ತಾಲ್ಲೂಕಿನಲ್ಲಿ ಕಂಡುಬಂದ ಒಂದು ಶಾಸನದ ಪ್ರಕಾರ ಈ ಭಾಗವು ಮಾರಸಿಂಹನಿಗೆ ಸೇರಿತೆಂದು ತಿಳಿದುಬರುತ್ತದೆ. ಪುಂಗನೂರು ತಾಲ್ಲೂಕಿನಲ್ಲಿ ದೊರೆತ ಶಾಸನಗಳಲ್ಲಿ ನಾಲ್ವರು ಗಂಗ ವಂಶಜರು - ಉತ್ತಮ ಚೋಳಗಂಗ (ಸೆಮ್ಬಗಚ್ಚಿ ಪತಿ ನಾಯನಾರ್) ವೀರಗಂಗನ್, ವೆಟ್ಟುಂ ಅಮರಾಭರಣಂ, ಸೆಲ್ವಗಂಗ, (ಉತ್ತಮ ಚೋಳ ಗಂಗ ಪದ್ಮದೇವಸುತ) ಉಲ್ಲೇಖಿತರಾಗಿದ್ದಾರೆ. ಗಂಗವಂಶದ ಮುಖ್ಯಧಾರೆಯೊಡನೆ ಇವರುಗಳ ಸಂಬಂಧ ಖಚಿತವಾಗಿಲ್ಲ. ಚೋಳರು ಕ್ರಿ.ಶ. ೧೦೦೪ ರಲ್ಲಿ ಪಶ್ಚಿಮಗಂಗರ ರಾಜಧಾನಿ ತಲಕಾಡನ್ನು ವಶಪಡಿಸಿಕೊಂಡ ನಂತರ ಅವರ ಆಳ್ವಿಕೆ ಖಿಲವಾಯಿತು.

ನೊಳಂಬರು ಅಥವಾ ನೊಳಂಬ ಪಲ್ಲವರು ಎಂದು ಕರೆಯಲಾದ ಮತ್ತೊಂದು ವಂಶವೂ ಈ ಪ್ರದೇಶದ ಆಳ್ವಿಕೆಯೊಡನೆ ಸಂಬಂಧಿಸಿದ್ದಿತು. ಈ ವಂಶದಲ್ಲಿ ಹನ್ನೊಂದು ಮಂದಿ ರಾಜರು ಆಗಿಹೋದರು, ಇವರು ನೊಳಂಬವಾಡಿ ೧೨೦೦೦ ಅಧಿಪತಿಗಳಾಗಿದ್ದರು. ಇವರು ಬಾಣ, ವೈದುಂಬ, ಚೋಳ, ರಾಷ್ಟ್ರಕೂಟರೊಡನೆ ತಾಕಲಾಟದಲ್ಲಿ ತೊಡಗಿದ್ದರು.

ಕ್ರಿ.ಶ. ೮೭೮ ರಲ್ಲಿ ನೊಳಂಬವಂಶದ ಮಹೇಂದ್ರ I ನ ಆಳ್ವಿಕೆಯಿಂದ ನೊಳಂಬ ವಂಶ ಪ್ರಮುಖವಾಯಿತು. ಈತ ನೊಳಂಬರಲ್ಲಿಯೇ ಅತಿಪ್ರಭಾವಶಾಲಿ. ತನ್ನ ರಾಜ್ಯವನ್ನು ಎಲ್ಲ ದಿಕ್ಕಿನಲ್ಲೂ ವಿಸ್ತರಿಸಿದ. ತನ್ನ ಒಡೆಯನಾದ ಪಶ್ಚಿಮ ಗಂಗರ ತಲಕಾಡನ್ನು ಹಿಡಿಯಲು ಹೊರಟು, ಆ ಹಾದಿಯಲ್ಲಿನ ಪುಲಿನಾಡನ್ನು ಆಕ್ರಮಿಸಲು ತನ್ನ ದಳಪತಿಗಳಾದ ಕಡುವಟ್ಟಿ ಮದುವರಿಗೆ ಹೇಳಿದ. (ಪುಂಗನೂರಿನ

ಬಳಿಯ ಲದ್ದಿಗಂ) ಇದನ್ನು ತಿಳಿದ ಬಾಣರಾಜ ವಿಜಯಾದಿತ್ಯ ವೀರ ಚೂಡಾಮಣಿ ಪ್ರಭುವು ತನ್ನ ಸೈನ್ಯದೊಡನೆ ಬಂದು ಶತ್ರುಸೈನ್ಯವನ್ನು ಧೂಳೀಪಟ ಮಾಡಿದ. ಕಾಳಗ ಭಯಂಕರವಾಗಿ ಹಲವು ಪ್ರಮುಖರು ಮರಣಿಸಿದರು. ಈ ಜಿಲ್ಲೆಯಲ್ಲಿ ದೊರೆತ ಇತರ ಶಾಸನಗಳೆಂದರೆ ಇನ್ನೊಬ್ಬ ದೊರೆ ಎರಡನೇ ವೀರ ಮಹೇಂದ್ರನವು. ಚೋಳ ರಾಜ್ಯದ ತೊಂಡಮಂಡಲದ ಮೇಲೆ ಇವನು ದಂಡೆತ್ತಿ ನಡೆದ. ಅಲ್ಲಿಂದ ತಿರುಗಿ ಬಂದ ವೀರ ಮಹೇಂದ್ರನು ಕೋಲಾರದಲ್ಲಿ ಪಾಳಯ ಹೂಡಿ ಪುಲಿನಾಡುವಿನ ಒಂದು ಗ್ರಾಮವನ್ನು ಒಬ್ಬ ಅಧಿಕಾರಿಗೆ ಬಳುವಳಿಯಾಗಿ ನೀಡಿದ. ಮತ್ತೊಬ್ಬ ನೊಳಂಬ ರಾಜ - ಇರಿವನೊಳಂಬ - II - ಕ್ರಿ. ಶ. ೧೦ನೇ ಶತಮಾನದ ಮಧ್ಯದಲ್ಲಿ ಪುಲಿನಾಡುವಿನ ಮತ್ತೊಂದು ಗ್ರಾಮವನ್ನು ಓರ್ವ ವರ್ತಕನಿಗೆ ಬಳುವಳಿಯಾಗಿ ನೀಡುವವರೆಗೆ ಪುಲಿನಾಡು ನೊಳಂಬರ ಅಧೀನದಲ್ಲಿಯೇ ಇದ್ದಿತೆಂದು ತೋರುತ್ತದೆ.

## ಕಲ್ಯಾಣಿ ಚಾಲುಕ್ಯರು ಹಾಗೂ ಚೋಳ ಸಾಮ್ರಾಟರು :

ಕ್ರಿ. ಶ. ೯೭೩ ರಲ್ಲಿ ರಾಷ್ಟ್ರಕೂಟರನ್ನು ಕಲ್ಯಾಣಿಯ ಪಶ್ಚಿಮ ಚಾಲುಕ್ಯರು ಹಿಂದಿಕ್ಕಿದರು. ಆದರೆ ಈ ಭೂಭಾಗ ಚೋಳರ ಅಧೀನ ದಲ್ಲಿಯೇ ಮುಂದುವರೆಯಿತು. ನಂತರ ಆಳಿದ ರಾಜರೆಂದರೆ ಒದನೇ ರಾಜರಾಜ (ಕ್ರಿ.ಶ. ೯೮೫-೧೦೧೪) ಒಂದನೇ ರಾಜೇಂದ್ರ (೧೦೧೨ - ೧೦೪೪) ಒಂದನೇ ರಾಜಾಧಿರಾಜ (೧೦೫೨ - ೧೦೬೩) ವೀರರಾಜೇಂದ್ರ (೧೦೬೩ - ೧೦೬೯) ಅಧಿರಾಜೇಂದ್ರ(೧೦೬೭-೬೮-೧೦೭೦) ಇವರಲ್ಲಿನ ಒಂದನೇ ರಾಜೇಂದ್ರನ ಆಳ್ವಿಕೆಯ ಮೂವತ್ತು ವರ್ಷಗಳು ಚೋಳಸಾಮ್ರಾಜ್ಯದ ಉತ್ಥಾನ ಕಾಲವಾಯಿತು. ಅವನು ಸಿಂಹಾಸನವನ್ನೇರಿದಾಗ, ರಾಷ್ಟ್ರಕೂಟರ ಹೊಡೆತಗಳಿಂದ ಬಹುಕಿರಿದಾಗಿದ್ದ ಚೋಳಸಾಮ್ರಾಜ್ಯ ಹಿರಿದಾಗಿ ವ್ಯವಸ್ಥಿತವಾಗಿ ಇವನ ಹಾಗೂ ನಂತರದ ಕಾಲದಲ್ಲಿ ಬೆಳೆಯಿತು. ಇವನ ಮತ್ತಿತರ ಚೋಳ ರಾಜರ ಆಳ್ವಿಕೆಗಳು, ಇಲ್ಲಿನ ಹಲವಾರು ಆಲಯಗಳಿಗೆ ಆಗಿಂದಾಗ್ಗೆ ರಾಜರು ನೀಡುತ್ತಿದ್ದ ಕಾಣಿಕೆಗಳ ಶಾಸನಗಳಿಂದ ವಿವರವಾಗಿ ದಾಖಲೆಯಾಗಿವೆ. ಈ ದತ್ತಿ ದಾನಗಳಿಂದ ಬಂದ ಆದಾಯವನ್ನು ಇಲ್ಲಿನ ಆಲಯಗಳನ್ನು ನೋಡಿಕೊಳ್ಳುವಲ್ಲಿ ವ್ಯಯಮಾಡಲಾಗುತ್ತಿತ್ತು. ದೇವಾಲಯಗಳಿಗಾಗಿ ದಾನ ನೀಡಿದ ಜಾನುವಾರುಗಳನ್ನು ಗೊಲ್ಲರಿಗೆ ಒಪ್ಪಿಸಲಾಗುತ್ತಿದ್ದು, ಅವರು ಆಲಯದ ನಂದಾದೀಪಕ್ಕೆ ತುಪ್ಪವನ್ನು ಒದಗಿಸುತ್ತಿದ್ದರು. ಇತರ ಕೆಲವು ಶಾಸನಗಳು ಪುಷ್ಕರಿಣಿ ನಿರ್ಮಾಣವನ್ನು, ಗುಡಿ, ಗೋಪುರ ನಿರ್ಮಾಣವನ್ನು, ತೆರಿಗೆಯೆತ್ತುವುದನ್ನು ಮನ್ನಾಮಾಡುವುದನ್ನು ವಿವರಿಸುತ್ತವೆ.

ಕ್ರಿ.ಶ. ೧೦೭೦ ರಲ್ಲಿ ಪೂರ್ವ ಚಾಲುಕ್ಯರ ರಾಜಕುಮಾರ ರಾಜೇಂದ್ರನು ಚೋಳ ಸಿಂಹಾಸನವನ್ನು ಕುಲೋತ್ತುಂಗ ಎಂಬ ಹೆಸರಿನಲ್ಲಿ ಅಧಿರೋಹಿಸಿದ (ಕ್ರಿ.ಶ. ೧೦೭೦-೧೧೨೦) ಚೋಳ ಚರಿತ್ರೆಯಲ್ಲಿ ಇವನ ಸಿಂಹಾಸನವೇರುವಿಕೆ ಒಂದು ಹೊಸಯುಗವನ್ನುಂಟುಮಾಡಿತು. ವೆಂಗಿಯ ರಾಜ್ಯ ಚೋಳ ಸಾಮ್ರಾಜ್ಯದ ಒಂದು ಭಾಗವಾಗಿ, ರಾಜರು ಚಾಲುಕ್ಯ - ಚೋಳರಾಜರೆಂದು ಕರೆಯಲ್ಪಟ್ಟರು. ಇವನು ಅನಗತ್ಯವಾದ ಯುದ್ಧಗಳನ್ನು ತೊರೆದು, ಪ್ರಜಾಭಿವೃದ್ಧಿಯತ್ತ ನಿಜವಾದ ಆಸಕ್ತಿ ತೋರಿಸಿದ. ಕುಲೋತ್ತುಂಗನ ನಂತರ ಬಂದವರೆಂದರೆ ಕ್ರಮವಾಗಿ ವಿಕ್ರಮಚೋಳ (ಕ್ರಿ.ಶ. ೧೧೧೮-೧೧೩೫) ಎರಡನೇ ಕುಲೋತ್ತುಂಗ (ಕ್ರಿ.ಶ. ೧೧೩೫-೧೧೫೦) ಎರಡನೇ ರಾಜರಾಜ (ಕ್ರಿ.ಶ. ೧೧೪೬ - ೧೧೭೩) ಮತ್ತು ಎರಡನೇ ರಾಜಾಧಿರಾಜ. ಈ ಜಿಲ್ಲೆಯ ಮೇಲಣ ಅವರ ಹಿಡಿತ ಹೇಗಿತ್ತೆಂಬುದು ಅವರ ಶಾಸನಗಳಿಂದ ತಿಳಿದುಬರುತ್ತದೆ. ಒಂದು ವಿಶೇಷ ಲಕ್ಷಣವೆಂದರೆ ಈ ಕಾಲದಲ್ಲಿ ಬೆಳೆದ ಸಾಮಂತರ ಸಂಖ್ಯೆ ಮತ್ತು ಅವರ ಪ್ರಭಾವ. ಈ ಕಾಲದಲ್ಲಿಯೇ ಈ ನೆರೆಹೊರೆಯ ಜಿಲ್ಲೆಗಳಲ್ಲಿ ಚೋಳ ಸಾಮ್ರಾಟರ ಆಶ್ರಿತರಾಜರಾಗಿ ತೆಲುಗು ಚೋಳರು ಪ್ರಬಾವಶಾಲಿಗಳಾದರು. ತಮ್ಮ ಸಾಮ್ರಾಟರನ್ನು ಮೀರಿ ನಡೆಯುವಷ್ಟು ಬಲವಿಲ್ಲದ ಇವರುಗಳು ಶ್ರೀಕಾಳಹಸ್ತಿ, ತಿರುಮಲೆ ದೇವಾಲಯಗಳಿಗೆ ಹಲವಾರು ಬಳುವಳಿಗಳನ್ನು ಕೊಟ್ಟಿರುವುದು ದಾಖಲೆಯಾಗಿವೆ.

ಒಂದನೇ ಆದಿತ್ಯನು ಆಕ್ರಮಿಸಿದ ನಂತರ ತೊಂಡಮಂಡಳವು ಚೋಳ ಸಾಮ್ರಾಜ್ಯದ ಒಂದು ಭಾಗವಾಗಿ ೧೩ನೇ ಶತಾಬ್ದಿಯವರೆಗೆ ಮುಂದುವರಿಯಿತು. ಈ ಬಗ್ಗೆ ದೊರೆತಿರುವ ಮೊದಲಶಾಸನವೆಂದರೆ (೨೩೨ ಜಿ.ಟಿ.) ಒಂದನೇ ಪರಾಂತಕನ (ಕ್ರಿ. ಶ. ೯೦೭ - ೯೫೫) ಆಡಳಿತದ ೨೯ನೇ ವರ್ಷಕ್ಕೆ ಸಂಬಂಧಿಸಿದ್ದು. ಕ್ರಿ.ಶ. ೯೫೬ ರಿಂದ ಹದಿನೈದು ವರ್ಷಗಳ ಕಾಲ ಅವನ ಮಗ ಪಾರ್ಥಿವೇಂದ್ರವರ್ಮನು ತೊಂಡ ಮಂಡಲದ ರಾಜ್ಯಪಾಲನಾಗಿದ್ದ. ಅವನ ಆಳ್ವಿಕೆಯ ೧೫ನೇ ವರ್ಷದಲ್ಲಿ ಎಂದರೆ ಕ್ರಿ.ಶ. ೯೭೦ ರಲ್ಲಿ ಅವನ ಅಧೀನದಲ್ಲಿದ್ದ ಪಲ್ಲವ ರಾಜನ ಪತ್ನಿ ಸಾಮವ್ವೆ ತಿರುಮಲೆಯ ದೇವಾಲಯದಲ್ಲಿ ಮೂಲವರರ ಹೋಲಿಕೆಯ ಪ್ರತಿಮೆಯನ್ನು ಸ್ಥಾಪಿಸಿ ಉತ್ಸವಗಳನ್ನು ನಡೆಸಲು ದಾನ ನೀಡಿದಳು (೧೮-೧೯-ಟಿ.ಟಿ.) ಒಂದನೇ ರಾಜರಾಜನ (೯೮೫-೧೦೧೪) ಮೂರು ಶಾಸನಗಳು ಈ ಪ್ರಾಂತದಲ್ಲಿದ್ದು ಅವುಗಳಲ್ಲಿ ಒಂದು (೧೨೦ ಟಿ. ಟಿ.) ತಿರುಮಲೆಗೆ ಸಂಬಂಧಿಸಿದ್ದು ಎರಡನೇ ಪರಾಂತಕನ ಪತ್ನಿ ನೀಡಿದ ಚಿನ್ನದ ದತ್ತಿಯನ್ನು ಸೂಚಿಸುತ್ತದೆ.

ನಂತರದ ರಾಜನಾದ ರಾಜೇಂದ್ರ ಚೋಳನ ಎರಡು ದಾಖಲೆಗಳಿವೆ. ಅದರಲ್ಲೊಂದು (ಜಿ. ಟಿ. ೨೨೪) ಕಪಿಲತೀರ್ಥದಲ್ಲಿ ಕಪಿಲೇಶ್ವರ ಆಲಯನಿರ್ಮಾಣವನ್ನು ಕುರಿತು ಹೇಳುವುದು.

ಒಂದನೇ ಕುಲೋತ್ತುಂಗನ ಹನ್ನೊಂದು ಶಾಸನಗಳು (ಕ್ರಿ.ಶ. ೧೦೭೦-೧೧೨೦) ಜಿ.ಟಿ. ೩೮೧, ೩೮೨, ೩೮೭, ೩೮೮, ಹಾಗೂ ಟಿ.ಟಿ. ೭೧, ೧೧೦, ೧೧೨, ೧೩೧, ೧೪೪, ೨೯೮, ೬೫೭) ತಿರುಮಲೆಯಲ್ಲೂ, ಯೋಗಿ ಮಲ್ಲಾವರದಲ್ಲೂ ಇವೆ. ಮತ್ತೆ ವಿಕ್ರಮ ಚೋಳನ (ಜಿ.ಟಿ. ೩೮೬) ಒಂದು ದಾಖಲೆಯೂ ಇದೆ.

ನಂತರದ ದೊರೆಯಾದ ಮೂರನೇ ರಾಜರಾಜನ ಏಳು ಶಾಸನಗಳಿವೆ. ಈ ಪ್ರಾಂತ್ಯದ ದೇವಾಲಯಗಳ ಲಕ್ಷಣವನ್ನು ಪರಿವರ್ತಿಸಿ, ಇಂದಿನ ರೂಪವನ್ನು ತಂದುಕೊಟ್ಟ ಒಂದು ಘಟನೆಯನ್ನು ಇಲ್ಲಿ ಉಲ್ಲೇಖಿಸುವುದು ಸೂಕ್ತ. ವೈಷ್ಣವ ಸಂತರಾದ ಆಳ್ವಾರರು ಭಕ್ತಿ ತತ್ತ್ವವನ್ನು ಹರಡಿ ಜನ ವಿಷ್ಣು ಪೂಜೆಗೆ ತೊಡಗುವುದರಲ್ಲಿ ನೆರವಾದರು. ನಂತರ ಬಂದ ಆಚಾರ್ಯರುಗಳು ಈ ವಿಷ್ಣುಭಕ್ತಿಗೆ ಭದ್ರ ಬುನಾದಿಯನ್ನು ಒದಗಿಸಿ, ವೈಷ್ಣವತೆಗೆ ಒಂದು ಸ್ವರೂಪವನ್ನು ತಂದುಕೊಟ್ಟರು. ಇವರಲ್ಲಿ ಅತ್ಯುನ್ನತಿಯನ್ನು ಪಡೆದವರು ರಾಮಾನುಜಾಚಾರ್ಯರು. ಅವರು ಶ್ರೀರಂಗವನ್ನು ಕೇಂದ್ರವಾಗಿಸಿಕೊಂಡು ತಮ್ಮ ವೈಷ್ಣವ ಭಕ್ತಿ ಪ್ರಸಾರದಲ್ಲಿ ನಿರತರಾದರು. ಅವರ ನೂತನ ವೇದಾಂತ ದರ್ಶನ - ವಿಶಿಷ್ಟಾದ್ವೈತವೆಂದು ಹೆಸರು ಪಡೆದು ಶೀಘ್ರ ಬೆಳವಣಿಗೆಗೆ ಒಳಗಾಯಿತು. ಆಲಯಗಳಲ್ಲಿ ತಮಿಳು ಪ್ರಬಂಧಗಳನ್ನು ಹಾಡುವ ಪರಂಪರೆಗೆ ಮೂಲಕಾರಕರಾದ ನಾಥಮುನಿಗಳು ತಮ್ಮ ತೀರ್ಥಯಾತ್ರೆಯ ಕಾಲದಲ್ಲಿ ತಿರುಮಲೆಗೂ ಆಗಮಿಸಿದ್ದರು. ನಂತರದ ಆಚಾರ್ಯರಾದ ಆಳವಂದಾರರೂ (ಯಾಮುನಾಚಾರ್ಯರು) ತಿರುಮಲೆಯನ್ನು ಸಂದರ್ಶಿಸಿದ್ದರು. ಅವರು ತಮ್ಮ ಮೊಮ್ಮಕ್ಕಳಲ್ಲಿ ಒಬ್ಬರಾದ ತಿರುಮಲ ನಂಬಿಯನ್ನು ತಿರುಮಲೆಯಲ್ಲಿಯೇ ವಾಸವಾಗಿದ್ದು ಪವಿತ್ರವಾದ ದೇವಾಲಯಕ್ಕೆ ಪುಷ್ಪಕೈಂಕರ್ಯ ಹಾಗೂ ತೀರ್ಥ ಕೈಂಕರ್ಯ ಮಾಡಿಕೊಂಡು ಬರಲು ನಿಯಮಿಸಿದ್ದರು. ತಿರುಮ

ಲನಂಬಿ ತಿರುಮಲೆಗೆ ವಲಸೆ ಬಂದು ಇಲ್ಲಿಯೇ ನಿಂತು ತಮ್ಮ ಇಡೀ ಬಾಳನ್ನು ಸ್ವಾಮಿಯ ಸೇವೆಯಲ್ಲಿ ಕಳೆದರು. ನಂತರದವರೇ ರಾಮಾನುಜರು. ಈ ಆಚಾರ್ಯರು ತಿರುಮಲೆಯನ್ನು ಮೂರು ಬಾರಿ ಸಂದರ್ಶಿಸಿರಬೇಕು. ಮೊದಲ ಬಾರಿ ಅವರು ತಿರುಮಲನಂಬಿಯೊಡನೆ ಒಂದು ವರ್ಷ ಕಾಲವಿದ್ದು ನಂಬಿಗಳಿಂದ ರಾಮಾಯಣ ರಹಸ್ಯಾರ್ಥವನ್ನು ತಿಳಿದರು. ಶೈವ ವೈಷ್ಣವರಲ್ಲಿ ತಿರುಮಲೆಯ ಆಲಯದ ದೇವರ ಬಗ್ಗೆ ವಿವಾದವುಂಟಾದಾಗ, ಆ ಜಗಳವನ್ನು ಪರಿಹರಿಸಲು ಎರಡನೆಯ ಬಾರಿ ಅವರು ತಿರುಮಲೆಗೆ ಬಂದರು. ಕಡೆಯ ಬಾರಿಗೆ ತಮ್ಮ ೧೦೨ ನೇ ವಯಸ್ಸಿನಲ್ಲಿ ತಿರುಮಲೆಗೆ ಬಂದಾಗ ಆಚಾರ್ಯರು ತಿರುಪತಿಯಲ್ಲಿ ಶ್ರೀ ಗೋವಿಂದರಾಜನನ್ನು ಪ್ರತಿಷ್ಠಾಪಿಸಿ, ಗೋವಿಂದರಾಜಪಟ್ಟಣವೆಂದು ಈಗಲೂ ಕರೆಯಲ್ಪಡುವ ತಿರುಪತಿ ನಗರಕ್ಕೆ ಬುನಾದಿಯನ್ನುಂಟಾಗಿಸಿದರು.

ಚಿತ್ತೂರು ಜಿಲ್ಲೆಯೊಡನೆ ಚೋಳರಿಗಿದ್ದ ಸಂಬಂಧ ಮತ್ತೂ ಹಲವು ದಶಕಗಳ ಕಾಲ ಮುಂದುವರಿಯಿತು. ಮೂರನೇ ಕುಲೋತ್ತುಂಗ ಚೋಳನು (ಕ್ರಿ.ಶ. ೧೧೭೮ - ೧೨೧೮) ಅನೇಕ ಎಡರುಗಳನ್ನು ಎದುರಿಸಿಯೂ ಸಾಮ್ರಾಜ್ಯದ ಏಕತೆಯನ್ನು ಕಾಪಾಡಿಕೊಂಡು ಬಂದ. ಈ ಕಾಲದಲ್ಲಿ ಚಿತ್ತೂರು, ಚೆಂಗಲ್ಪಟ್ಟು, ಎರಡು ಆರ್ಕಾಡು ಜಿಲ್ಲೆಗಳನ್ನು ಆಳಿದ ಶಂಭುವರಾಯರು, ಕಾಡವರಾಯರು, ಚೇದಿರಾಯರು, ಯಾದವರಾಯರು ಸಾಮಂತರಲ್ಲಿ ಪ್ರಬಲರಾಗಿದ್ದರು. ಕುಲೋತ್ತುಂಗನ ಆಳ್ವಿಕೆಯ ಕಾಲದ ಶಾಸನಗಳಲ್ಲಿ ಹೆಸರಿಸಲಾದ ಸಾಮಂತರ ಸಂಖ್ಯೆ ಇಲ್ಲಿನ ತ್ವರಿತ ಪರಿವರ್ತನ ಗತಿಯನ್ನು ಸೂಚಿಸುತ್ತದೆ. ಅವನ ನಂತರದ ಮೂರನೇ ರಾಜರಾಜನ (ಕ್ರಿ.ಶ. ೧೨೧೬-೧೨೬೦) ಆಳ್ವಿಕೆ ನಿರಂತರ ವಿರೋಧಗಳಿಂದ ತುಂಬಿದ್ದಿತು. ಅವನ ಆಳ್ವಿಕೆಯ ೪೯ ನೇ ವರ್ಷದವರೆಗಿನ ಶಾಸನಗಳು ಚಿತ್ತೂರು ಹಾಗೂ ನೆರೆಯ ಜಿಲ್ಲೆಗಳಲ್ಲಿ ಕಂಡುಬರುತ್ತವೆ. ಇದರಿಂದಾಗಿ ಇಡೀ ಚಿತ್ತೂರು ಜಿಲ್ಲೆಯ ಮೇಲೆ ಚೋಳರ ಪ್ರಭುತ್ವ ಮುಂದುವರಿಯಿತೆಂದು ಹೇಳಬರುತ್ತದೆ. ಕಡೆಯ ಚೋಳರಾಜನಾದ ಮೂರನೇ ರಾಜೇಂದ್ರನ (ಕ್ರಿ.ಶ. ೧೨೪೬ - ೧೨೭೯) ಆಡಳಿತದಲ್ಲಿ ಚೋಳರ ಪ್ರಭುತ್ವ ಕ್ಷೀಣವಾಗಿ, ವಿಜಯಗಂಡಗೋಪಾಲನೂ, ಪಾಂಡ್ಯರ ಸನ್ನಿಹಿತನಾದ ಕೊಪ್ಪೆರುಂಜಿಗನೂ ತೊಂಡಮಂಡಲದ ಕ್ರಮವಾಗಿ ಉತ್ತರದಕ್ಷಿಣ ಭಾಗಗಳನ್ನು ಹಂಚಿಕೊಂಡಿದ್ದಂತೆ ಕಂಡುಬರುತ್ತದೆ.

ನಂತರ ಪ್ರವರ್ಧಮಾನಕ್ಕೆ ಬಂದದ್ದು ದಕ್ಷಿಣದಲ್ಲಿ



ಪಾಂಡ್ಯ ಹೊಯ್ಸಳರು ಹಾಗೂ ಉತ್ತರದಲ್ಲಿ ಕಾಕತೀಯ, ಯಾದವರುಗಳ ರಾಜ್ಯಗಳು. ಕಿರಿಯ ಬಣಗಳಾದ ನೆಲ್ಲೂರಿನ ತೆಲುಗು ಚೋಳರು ಮುಂತಾದವರು ಮುಖ್ಯಬಣಗಳ ವಶವರ್ತಿಗಳಾಗಿದ್ದರು. ಜಟಾವರ್ಮ ಸುಂದರ ಪಾಂಡ್ಯನ ಸಿಂಹಾಸನಾರೋಹಣ (ಕ್ರಿ.ಶ. ೧೨೫೧) ಒಂದು ಪ್ರಮುಖ ಘಟ್ಟ. ಅವನೊಬ್ಬ ಹೆಸರಾಂತ ಯೋಧನೂ, ಆಕ್ರಾಮಕನೂ ಆಗಿದ್ದು, ಪಾಂಡ್ಯ ರಾಜ್ಯ ಉನ್ನತಿಯನ್ನು ಪಡೆಯಿತು. ತನ್ನ ಆಳ್ವಿಕೆಯ ಆರಂಭದಲ್ಲಿಯೇ ಜಟಾವರ್ಮನು ಹೆಚ್ಚು ಭೂಭಾಗವನ್ನು ಆಕ್ರಮಿಸಿ ನೆಲ್ಲೂರಿಗಿಂತಲೂ ಆಚೆಗೆ ರಾಜ್ಯವನ್ನು ವಿಸ್ತರಿಸಿದನು. ಶ್ರೀಕಾಳಹಸ್ತಿಯ ಮಣಿಕಂಠೇಶ್ವರ ಆಲಯದ ಎದುರಿನ ಶಾಸನದ ಪ್ರಕಾರ ಕಾಕತೀಯ ಗಣಪತಿಯೊಡನೆಯೂ ಇವನು ಘರ್ಷಣೆ ಹೊಂದಿದ. ಈ ಜಿಲ್ಲೆಯಲ್ಲಿ ಇವನ ಐದು ಶಾಸನಗಳು ಕಂಡುಬಂದಿವೆ. ಜಿಲ್ಲೆಯ ಶಾಸನಗಳಲ್ಲಿ ದೊರೆಯುವ ಇನ್ನೊಬ್ಬ ಪಾಂಡ್ಯರಾಜನೆಂದರೆ ಒಂದನೇ ಮಾರವರ್ಮ ಕುಲಶೇಖರ (ಕ್ರಿ.ಶ. ೧೨೬೮-೧೩೧೮) ಇವನು ಮೂರನೇ ರಾಜೇಂದ್ರ ಚೋಳನೊಡನೆ ಸೇರಿದ ಹೊಯ್ಸಳ ರಾಮನಾಥನೊಡನೆ ಯುದ್ಧಮಾಡಿ ಇಬ್ಬರನ್ನೂ ಸೋಲಿಸಿ ಅವರ ರಾಜ್ಯವನ್ನು ವಶಪಡಿಸಿಕೊಂಡ. ಇಲ್ಲಿ ಸೋತ ರಾಮನಾಥನು ಇವನ ಸೋದರ ಮೂರನೇ ನರಸಿಂಹನ ವಿರುದ್ಧ ಯುದ್ಧಮಾಡಿ ಸ್ವಲ್ಪ ರಾಜ್ಯವನ್ನು ವಶಪಡಿಸಿಕೊಂಡ. ಪುಂಗನೂರಿನಲ್ಲಿ ಇವನ ಆಳ್ವಿಕೆಯ ೩೮ನೇ ವರ್ಷದ ಒಂದು ಶಾಸನ ದೊರೆತಿದ್ದು, ಅದು ವಾಮನವನಂ ಕುಟ್ಟಿಪೆರುಮಾಳ್ ಎಂಬುವ ಒಬ್ಬನು ಕರುಮಾನಿಕ್ಕತ್ತಾಳ್ವಾರ್ ದೇವಾಲಯಕ್ಕೆ ನಾಲ್ಕು ವಂಡವ ಜಮೀನನ್ನು ನೀಡಿದ್ದನ್ನು ದಾಖಲಿಸುತ್ತವೆ.

ಹದಿಮೂರನೇ ಶತಾಬ್ದಿಯ ಮಧ್ಯದಲ್ಲಿ ಚೋಳರ ಪ್ರಾಬಲ್ಯ ತಗ್ಗಿ ಒಂದನೇ ಮಾರವರ್ಮ ಸುಂದರ ಪಾಂಡ್ಯನ ಪ್ರಾಬಲ್ಯ ಹೆಚ್ಚಿತು. ಈತ ತೊಂಡಮಂಡಲವನ್ನು ಹಿಡಿದು ಚೋಳರನ್ನು ಸದೆಬಡಿದು ನೆಲ್ಲೂರಿನವರೆಗೂ ದಂಡೆತ್ತಿ ಅಲ್ಲಿ ವೀರಾಭಿಷೇಕವನ್ನು ಆಚರಿಸಿದ. ತಿರುಮಲೆಯ ಆಲಯದಲ್ಲಿ ಪಾಂಡ್ಯರಾಜರ ಹಲವು ಶಾಸನಗಳಿವೆ. (ಟಿ.ಟಿ. ೧೨೭, ೧೬೪, ೧೭೨, ೧೭೫, ೨೩೧, ೨೩೯, ೨೪೧, ೧೪೦.)

## ಯಾದವರಾಯರು :

ತೊಂಡಮಂಡಲದ ಪೂರ್ವ ಹಾಗೂ ಉತ್ತರ ಭಾಗಗಳಲ್ಲಿ ಪ್ರಭಾವಶಾಲಿಗಳಾಗಿದ್ದ ಸ್ಥಳೀಯ ಮನೆತನದವರು ಯಾದವರಾಯರು. ಈ ಮನೆತನದ ಮೂಲಪುರುಷ ತಿರುಕಾಳತ್ತಿದೇವ ಯಾದವರಾಯ. ಇವನು ಚಾಳುಕ್ಯನಾರಾಯಣ ಎಂಬ ಬಿರುದನ್ನು ಹೊಂದಿದ್ದನ್ನು ನೋಡಿದರೆ ಪೂರ್ವ ಚಾಳುಕ್ಯರೊಡನೆ ಸಂಬಂಧ ಹೊಂದಿ ವೆಂಗಿಯ ಸ್ವಲ್ಪ ಭಾಗವನ್ನು ಅವರಿಂದ ಪಡೆದಿದ್ದನೆಂದು ತೋರುತ್ತದೆ. ಇವನು ತೆಲುಗು ಚೋಳರೊಡನೆ ವೈವಾಹಿಕ ಸಂಬಂಧ ಬೆಳೆಸಿಕೊಂಡು ಹೆಚ್ಚು ಪ್ರಭಾವಶಾಲಿಯಾದ. ಇವನ ನಂತರ ಇವನ ಮಗ ವೀರ ರಾಕ್ಷಸಯಾದವರಾಯನೂ, ತದನಂತರ ವೀರನರಸಿಂಗ ಯಾದವರಾಯನೂ ಬಂದರು. ಈತ ಐವತ್ತೊಂದು ವರ್ಷ ರಾಜ್ಯಭಾರಮಾಡಿದ. ಚೋಳರಾಜ ಮೂರನೇ ರಾಜೇದ್ರ ನೊಡನೆ ಸೇರಿ ಕೊಪ್ಪೆರಂಜಿಗನ ಮೇಲೆ ಯುದ್ಧಮಾಡಿದ. ಈತ ಹಿರಿಯಕಾಡವರಾಯನಾದ ಅಳಗಿಯ ಸಿಯನ್ ನೊಡನೆಯೂ ಘರ್ಷಣೆ ಗೊಂಡ. ಇವನು - ಜಟಾವರ್ಮ ಸುಂದರ ಪಾಂಡ್ಯನು ಯುದ್ಧದಲ್ಲಿ ಕೊಂದ ತೆಲುಗು ಪಲ್ಲವ ವೀರಗಂಡಗೋಪಾಲನ - ದಳಪತಿಯಾಗಿದ್ದಿರಬೇಕು. ಈತ ಕ್ರಿ.ಶ. ೧೩೩೬-೩೭ ರಿಂದ ಸುಮಾರು ಹದಿನೈದು ವರ್ಷ ಆಳ್ವಿಕೆ ನಡೆಸಿರಬೇಕು. ತಿರುವೆಂಕಟನಾಥ ಯಾದವರಾಯನು ತನ್ನ ಸೇನಾಧಿಪತಿಯಾದ ಸಿಂಗಯ ದಣ್ಣಾಯಕನ ಕೋರಿಕೆಯ ಮೇರೆಗೆ ಪೊಂಗಲೂರು ಗ್ರಾಮದ ಅರ್ಧಭಾಗವನ್ನು ತಿರುವೆಂಕಟಮುಡೈಯಾನ್ ಆಲಯದಲ್ಲಿ ಆಡಿ ಉತ್ಸವವನ್ನು ನಡೆಸಲು ದತ್ತಿ ನೀಡಿದ. ಈತ ಹೊಯ್ಸಳರ ಮೂರನೇ ಬಲ್ಲಾಳನ ಸಾಮಂತನಾಗಿ,

'ವಲ್ಲಾಳದೇವ ವರಿ' ಎಂಬ ಹೆಸರಿನ ತೆರಿಗೆಯನ್ನೆತ್ತಿ ಬಲ್ಲಾಳನಿಗೆ ಕಪ್ಪವನ್ನು ನೀಡುತ್ತಿದ್ದ. ಈತ ತನ್ನ ವಂಶದ ಹಿರಿಯರೊಡನೆ ಅಥವಾ ನಂತರದ ಶ್ರೀರಂಗನಾಥನೊಡನೆ ಹೊಂದಿದ್ದ ಸಂಬಂಧ ಖಚಿತವಾಗಿಲ್ಲ. ಏನೇ ಆದರೂ ತಿರುವೆಂಕಟನಾಥನು ಶ್ರೀರಂಗನಾಥ ಯಾದವ ರಾಯನ ತಂದೆಯೆಂದು ಎಣಿಸಲಾಗಿದೆ. ಈ ಕಾಲದಲ್ಲಿ ಅನೇಕ ತೆರಿಗೆಗಳನ್ನು ವಿಧಿಸಲಾಯಿತು. ಸ್ವರ್ಣತೆರಿಗೆ, ಧ್ಯಾನ್ಯತೆರಿಗೆ, ಉಚಿತ ಸೇವೆಗಳಿಗಾಗಿ - ಅಮಂಜಿವಗ್ಗೆ - ತೆರಿಗೆ ನಾಟ್ಟಾರರ ಪರಿಪತ್ತಿನ ತೆರಿಗೆ, ಮತ್ತು ಇತರ ಹಳೆಯ ಹೊಸ ತೆರಿಗೆಗಳು. ಜಾನುವಾರು ತೆರಿಗೆಗಳೂ, ರಸ್ತೆ ಪರವಾನಗಿ ತೆರಿಗೆಗಳೂ. ವ್ಯಾಪಾರಿಗಳ ಕೆಲಸಗಾರರ ವೃತ್ತಿ ತೆರಿಗೆಗಳು, ತೋಟಗಾರಿಕೆಯ ತೆರಿಗೆ, ಊಲವಾಡಿಯ ತೆರಿಗೆ, ಮೊದಲಾದವು. ಎರಡು ತೆರಿಗೆಗಳು ರಾಜಮಾತೆಯ ಹಾಗೂ ಯುವರಾಜನ ಸಂಕ್ಷೇಮಕ್ಕೆ ಸಂಬಂಧಿಸಿದವು. ರಾಜ ಯುದ್ಧದಲ್ಲಿ ಶತ್ರುಗಳ ಸೆರೆ ಸಿಕ್ಕಾಗ ನೀಡುವ ಬಿಡುಗಡೆ ಧನದ ತೆರಿಗೆಯು ರಾಜನಿಗಾಗಿ ನೀಡುತ್ತಿದ್ದ ಕಾಣಿಕೆಯಾಗಿತ್ತು.

ಶ್ರೀರಂಗನಾಥ ಯಾದವರಾಯನು ಕ್ರಿ.ಶ. ೧೩೩೬ - ೩೭ ರಲ್ಲಿ ರಾಜನಾಗಿ ೨೦ ವರ್ಷಗಳಕಾಲ ಆಳಿದನು. ವಿಜಯನಗರ ರಾಜ್ಯ ಸ್ಥಾಪನೆಯಾದನಂತರ ಈತನು ತಾನೇ ಸ್ವತಃ ವಿಜಯನಗರದ ಆಶ್ರಿತನಾಗಿ ಹರಿಹರನ ಸಾಮಂತನಾದನು. ಈತನು ತನ್ನ ಆಜ್ಞೆಯನ್ನು ಮೀರಿದವರ ವಿರುದ್ಧ ಯುದ್ಧಮಾಡಿ ಅವರನ್ನು ನಗರಚ್ಯುತರನ್ನಾಗಿಸಿ ಅರಣ್ಯಗಳಿಗೆ ಓಡುವಂತೆ ಮಾಡುತ್ತಿದ್ದನಂತೆ. ಈ ಕಾಲವೆಲ್ಲವೂ ರಾಜಕೀಯ ರಂಗದ ಏಳು ಬೀಳುಗಳಲ್ಲಿ ತುಂಬಿದ್ದರಿಂದಾಗಿ ಈತ ತನ್ನ ಮೇಲ್ಮೆಯನ್ನು ಸ್ಥಾಪಿಸಲೆಂದೋ, ಅಥವಾ ವಿಜಯನಗರದ ಪರವಾಗಿಯೋ ಇಂತಹ ಯುದ್ಧಗಳಲ್ಲಿ ಭಾಗವಹಿಸಿದ್ದಿರಬೇಕು.

ಹದಿಮೂರನೇ ಶತಾಬ್ದಿಯ ಕೊನೆಗೆ ಆರಂಭವಾದ ದೆಹಲಿ ಸುಲ್ತಾನರ ಧಾಳಿಗಳು ದಕ್ಷಿಣದ ನಾಲ್ಕೂ ರಾಜ್ಯಗಳನ್ನು ಬುಡಮೇಲಾಗಿಸಿ, ಉಲ್ಲೋಲಕಲ್ಲೋಲವನ್ನುಂಟಾಗಿಸಿ ಹದಿನಾಲ್ಕನೆಯ ಶತಕದ ಮಧ್ಯದಲ್ಲಿ ವಿಜಯನಗರ, ಬಹಮನಿ ರಾಜ್ಯಗಳ ಸ್ಥಾಪನೆಯಾಗುವುದರೊಡನೆ ಕೊನೆಗೊಂಡುವು. ಒಂದನೇ ಮಹಮದ್ (ಕ್ರಿ.ಶ. ೧೩೫೮ - ೧೩೭೫) ನಿಂದ ಬಹುಮನಿ ರಾಜ್ಯದ ಅಂತ್ಯದ ವರೆಗೂ ವಿಜಯನಗರಕ್ಕೂ ಬಹಮನಿ ರಾಜ್ಯಕ್ಕೂ ತಾಕಲಾಟವಿದ್ದಿತು. ಕೃಷ್ಣಾ - ತುಂಗಭದ್ರಾ ನದಿಗಳ 'ದೋ ಆಬ್' ಪ್ರದೇಶ ಇವರ ಘರ್ಷಣೆಯ ಕಾರಣವಾಗಿತ್ತು. ಬಹಮನಿ ರಾಜ್ಯ ಕ್ರಿ.ಶ. ೧೫೩೮ ರಲ್ಲಿ ಕೊನೆಗೊಂಡಿತಾದರೂ ಅದಕ್ಕೂ ಬಹಳ ಹಿಂದೆಯೇ ಬಹಮನಿ ಸುಲ್ತಾನ ತನ್ನ ರಾಜ್ಯದ ಭಾಗಗಳ ರಾಜ್ಯಪಾಲರ ಮೇಲಿನ ಹಿಡಿತವನ್ನು ಕಳೆದುಕೊಂಡಿದ್ದ.

## ಕ್ರಿ.ಶ. ೧೨೬೦ - ೧೩೬೦ ವರೆಗೆ ತಿರುಮಲೆ :

ಕ್ರಿ. ಶ. ೧೩೩೬ ರಲ್ಲಿ ಸ್ಥಾಪನೆಯಾದ ವಿಜಯನಗರ ಸಾಮ್ರಾಜ್ಯದಲ್ಲಿ, ಅದು ಹುಟ್ಟಿದಾಗಲೇ ತೊಂಡಮಂಡಲವೂ ಅದರಲ್ಲಿ ಸೇರಿದ್ದಿತು. ಆದರೂ ತಿರುಮಲೆ - ತಿರುಪತಿ ಪ್ರಾಂತ್ಯದಲ್ಲಿ ದೊರಕಿರುವ ವಿಜಯನಗರದ ಮೊದಲಶಾಸನ ಕ್ರಿ.ಶ. ೧೩೫೮ ರ ಕಾಲದ್ದು. ಸುಂದರಪಾಂಡ್ಯನ ಕಾಲ ಹಾಗೂ ವಿಜಯನಗರದ ಕಾಲದ ದಾಖಲೆಯ ಈ ವರ್ಷದ ಮಧ್ಯಕಾಲವನ್ನು ಪರಿವರ್ತನ ಕಾಲವೆಂದು ಕರೆಯಲಾಗಿದೆ. ಈ ಕಾಲದಲ್ಲಿ ಚೋಳರಾಜರ ದೌರ್ಬಲ್ಯದ ಪ್ರಯೋಜನ ಪಡೆದು ಅನೇಕ ಸಾಮಂತರು ಸ್ವತಂತ್ರರಾದರು. ಈ ಕಾಲದಲ್ಲಿ ಅವರುಗಳೆಲ್ಲ ಯಾವ ಒಡೆತನವನ್ನೂ ಹೇಳದೆಯೇ ಶಾಸನಗಳಲ್ಲಿ ಕಂಡುಬರುತ್ತಾರೆ.

ಈ ಸಾಮಂತ - ಸ್ವತಂತ್ರರಲ್ಲಿ ಇಬ್ಬರು - ತಂದೆ ಮಗ - ಅರ್ವಾಚೀನ ಪಲ್ಲವರು - ಕೊಪ್ಪೆರುಂಜಿಗ - ಕಾಡವರಾಯನು ಚಂಡಮಂಡಲದ ಸುತ್ತಣ ಸಣ್ಣ ರಾಜ್ಯದ ಅಧಿಪತಿಯಾಗಿದ್ದ. ಈತ ತೊಂಡಮಂಡಲದ ಒಂದು ಭಾಗವನ್ನು ಹಿಡಿದು ಕ್ರಿ.ಶ. ೧೨೨೦ ರಲ್ಲಿ ಆಳಿದ. ಅವನ ಮಗ ಪ್ರಸಿದ್ಧ ಕೊಪ್ಪೆರುಂಜಿಗ - ಖಡ್ಗದೇವನು ಕ್ರಿ. ಶ. ೧೨೪೩ ರಲ್ಲಿ ಸಿಂಹಾಸನಾರೋಹಣ ಮಾಡಿ, ತೊಂಡಮಂಡಲವನ್ನು ಆಕ್ರಮಿಸಿ ನರಸಿಂಗಯಾದವರಾಯನೊಡನೆ ಉತ್ತನೂರಿನ ಬಳಿ ಯುದ್ಧ ಮಾಡಿದ. ಇನ್ನೂ ಮುಂದುವರಿದು ಪೂರ್ವಗೋದಾವರಿಯ ದ್ರಾಕ್ಷಾರಾಮದ ವರೆಗೆ ದಂಡೆತ್ತಿಹೋಗಿ ಕಾಕತೀಯರ ಗಣಪತಿದೇವನಿಂದ ಸೋಲಿಸಲ್ಪಟ್ಟು ಅವಮಾನಿತನಾಗಿ ಹಿಂದಿರುಗಿದ. ನಂತರ ಇವನನ್ನು ಸುಂದರ ಪಾಂಡ್ಯನು ಅಧೀನಗೊಳಿಸಿಕೊಂಡನು. ಇವನ ಎರಡು ಶಾಸನಗಳು (ಟಿ. ಟಿ. ೨೨೬, ೨೨೭) ತಿರುಮಲೆಯಲ್ಲಿ ಕಂಡುಬರುತ್ತವೆ.

ಚೋಳರ ಅಧೀನರಾಗಿ ತೊಂಡಮಂಡಲವನ್ನು ಹಲವಾರು ತೆಲುಗು ಪಲ್ಲವರು ಆಳುತ್ತಿದ್ದರು. ಈಗಣ ನೆಲ್ಲೂರು, ಕಡಪ, ಕರ್ನೂಲು, ಚಿತ್ತೂರು, ಉತ್ತರ ದಕ್ಷಿಣ ಆರ್ಕಾಟುಗಳು, ಚೆಂಗಲ್ಪಟ್ಟು ಜಿಲ್ಲೆಗಳು ಅಂದಿನ ತೊಂಡಮಂಡಲದ ಭಾಗಗಳಾಗಿದ್ದವು. ಇವರೂ ಸಹ ಸಮಕಾಲೀನ ಚೋಳ ರಾಜರ ದೌರ್ಬಲತೆಯ ಕಾರಣದಿಂದಾಗಿ ಸ್ವತಂತ್ರರಾ

ಪಾಂಡ್ಯರಾಜನು ರಂಗಪ್ರವೇಶ ಮಾಡಿದಾಗ ;
ಲಕ್ಕೆ ಅವನ ಸಾರ್ವಭೌಮತೆಯನ್ನು ಒಪ್ಪಿದರು
ಭಾಗದಲ್ಲಿ ಆಳಿದ ವಂಶಾವಳಿಯಲ್ಲಿ ತಿರುಮ
ಆಲಯ ದಾಖಲಿಸುವ ರಾಜರೆಂದರೆ ವಿ
ಗಂಡಗೋಪಾಲ, ರಾಜಗಂಡಗೋಪಾಲ, ಹಾ
ತ್ರಿಪುರಾಂತಕರುಗಳು. (ಬಿ. ಟಿ. - ೧೭೩, ೨
೧೪೩, ೭೩, ೪೩೧, ೧೨೮, ೨೯೬, ೧೧೧, ೧
೧೩೯, ೧೪೧, ೧೨೯, ೧೨೫, ೧೩೪, ೧೧೯, ೧.
೧೨೬, ೪೪೩, ೨೨೧, ೭೨ ಹಾಗೂ ಜಿ. ಟಿ. ೧೨

ತೊಂಡಮಂಡಲದಲ್ಲಿ ಸಾಕಷ್ಟು ಪ್ರಭಾವ ಬೀ
ಮತ್ತೊಂದು ಕುಟುಂಬವೆಂದರೆ ನೆಲ್ಲೂ
ತೆಲುಗು ಚೋಳ ಮನೆತನ. ಅಲ್ಲಂ ತಿರುಕಾ
ದೇವ ಈ ವಂಶದವನಾಗಿ ಕೆಲವು ಕಾಲ ಕ
ಯನ್ನು ಅಧೀನ ಪಡೆಸಿಕೊಂಡಿದ್ದ. ತಿರುಮಲೆ
ದಾಖಲೆಗಳಲ್ಲಿ ಇವನ ಹೆಸರೂ ಇದೆ.

ಸ್ಥಳೀಯ ರಾಜರಲ್ಲಿ ತಿರುಮಲೆ - ತಿರು
ತಿಗಳಲ್ಲಿ ಬಹುಮುಖ್ಯರೆಂದರೆ ಯಾದವ
ಯರು. ಈ ಭಾಗದ ಆಲಯಗಳೊಡನೆ ಸ
ಹದ ಸಂಬಂಧ ಹೊಂದಿ, ಹಲವಾರು ಆ
ಯೋಪಯೋಗಿ ಕಾರ್ಯಗಳನ್ನು ನಿರ್ವಹಿಸಿದರ

ನೆಲ್ಲೂರು, ಚಿತ್ತೂರು ಜಿಲ್ಲೆಗಳ ವೆಂಕಟಗಿರಿ, ಶ್ರೀಕಾ
ಹಸ್ತಿ ಚಂದ್ರಗಿರಿ ತಾಲ್ಲೂಕುಗಳನ್ನು ಆಳಿದರು. ಇ
ರಲ್ಲಿ ಮೊದಲಿಗನೆಂದರೆ ಚೋಳಸಾಮಂತನಾ
ಕ್ರಿ.ಶ. ೧೧೮೪ ರಿಂದ ೧೨೨೭ ರವರೆಗೆ ಆಳಿ
ಘಟ್ಟಿದೇವ. ತಿರುಮಲೆಯಲ್ಲಿ ಶೈವ ವೈಷ್ಣವರ ನ
ವಣ ವಿವಾದವನ್ನು ಬಗೆಹರಿಸಲು ರಾಮಾನುಜ
ಚಾರ್ಯರನ್ನು ಆಹ್ವಾನಿಸಿದವನು ಇವನೇ ಎಂ
ಮಾತೂ ಇದೆ. ಆದರೆ ರಾಮಾನುಜಾಚಾರ್ಯ
ಕ್ರಿ.ಶ. ೧೧೩೦ ರಲ್ಲಿ ವೈಕುಂಠವಾಸಿಗಳಾದಮೇ
ಕ್ರಿ.ಶ. ೧೧೮೪ ರಲ್ಲಿ ಘಟ್ಟಿದೇವನು ರಾಜನಾ
ಎಂಬ ಕಾರಣದಿಂದ ಈ ಮಾತಿನಲ್ಲಿ ಹುರುಳಿ
ವೆಂಬುದು ಸಿದ್ಧ. ಘಟ್ಟಿದೇವನ ಮಗ ರಾಜಮಲ್ಲನ
ಕ್ರಿ.ಶ. ೧೨೦೮ - ೧೨೩೭ ರವರೆಗೆ ಆಳಿದ, ಇವನ
ಪ್ರಾಯಶಃ ಯಾದವನಾರಾಯಣ ಮೂರ್ತಿಯನ್ನ
ಪ್ರತಿಷ್ಠಾಪಿಸಿದ. ನಂತರದ ರಾಜನೆಂದರೆ ಕ್ರಿ. ಶ
೧೨೩೭ ರಿಂದ ೧೨೪೬ ವರೆಗೆ ಆಳಿದ ತಿರುಕಾಳ
ದೇವ. ತಿರುವಣ್ಣಾಮಲೈಯಿಂದ ಕಾಳಹಸ್ತಿಯವ
ಗಿನ ವಿಶಾಲ ಭೂಭಾಗವನ್ನು ಆಳಿದ ಇವನ ಮ
ವೀರರಾಕ್ಷಸನು ಒಂದನೇ ಕುಲೋತ್ತುಂಗನ ಕಾಲ
ದಲ್ಲಿ ಪ್ರಸಿದ್ಧನಾದ. ನಂತರ ಬಂದವನು ಯಾದವ
ರಾಯ ಕುಲದಲ್ಲಿ ಅತಿ ಶ್ರೇಷ್ಠನಾದ ವೀರನರಸಿಂಗ
ದೇವ. ಈತ ಮೊದಲಿಗೆ ಚೋಳ ಸಾಮಂತನಾ

ದರೂ ನಂತರ ಪಾಂಡ್ಯರ ಅಧೀನನಾದನು. ತಿರುಮಲೆ - ತಿರುಪತಿ ಆಲಯಗಳಿಗಾಗಿ ಅನೇಕ ಕೆಲಸಗಳನ್ನು ಮಾಡಿದ. ವೀರನರಸಿಂಗನ ಮಗ ತಿರುವೆಂಕನಾಥನು ಕ್ರಿ.ಶ. ೧೩೧೦ ರಿಂದ ೧೩೩೬ ರವರೆಗೆ ಆಳಿದ. ಈ ಕಾಲದಲ್ಲಿ ತೊಂಡಮಂಡಲದ ಹೊರಗೆ ಹಲವಾರು ಪರಿವರ್ತನೆಗಳಾದವು. ಉತ್ತರ ಭಾರತದಲ್ಲಿ ೧೨ನೇ ಶತಮಾನದ ಕೊನೆಗೆ ದೆಹಲಿ ಸುಲ್ತಾನರು ದೆಹಲಿಯಲ್ಲಿ ತಮ್ಮ ರಾಜ್ಯವನ್ನು ಸ್ಥಾಪಿಸಿ, ಶೀಘ್ರವಾಗಿ, ಹರಡುವ ತಮ್ಮ ಧಾಳಿಗಳನ್ನು ಆರಂಭಿಸಿದರು. ಹಿಂದೂ ಮತವೂ, ತುಸುವೇ ಆಗಿದ್ದ ಬೌದ್ಧಮತವೂ ಈ ಧಾಳಿಗಳಿಂದ ಬಹುವಾದ ಹೊಡೆತ ಆಕ್ರಮಣವನ್ನೆದುರಿಸಬೇಕಾಯಿತು. ೧೩ನೇ ಶತಮಾನದ ಕೊನೆಗೆ ದೆಹಲಿಯಲ್ಲಿ ಖಿಲ್ಜಿ ಸಾಮ್ರಾಜ್ಯ ಉದಯವಾಯಿತು. ಈ ವೇಳೆಗೆ ದಕ್ಷಿಣದಲ್ಲಿ ಎರಡು ಹಿರಿಯ ಹಿಂದೂ ಸಾಮ್ರಾಜ್ಯಗಳು ಆಧುನಿಕ ದೌಲತಾಬಾದ್ ಆದ ದೇವಗಿರಿಯಲ್ಲಿ ಯಾದವ ರಾಜ್ಯವೂ, ತೆಲುಗು ಮಾತನ್ನಾಡುತ್ತಿದ್ದ ಇಡೀ ಪ್ರದೇಶವನ್ನು ಒಳಗೊಂಡ ಕಾಕತೀಯ ಸಾಮ್ರಾಜ್ಯವೂ, ಮೈಸೂರಿನ ದ್ವಾರಸಮುದ್ರವನ್ನು ರಾಜಧಾನಿಯಾಗಿಸಿಕೊಂಡ ಹೊಯ್ಸಳ ಸಾಮ್ರಾಜ್ಯ ಹಾಗೂ ಮಧುರೆಯಲ್ಲಿ ಪ್ರಬಲರಾಗಿದ್ದು ಪಾಂಡ್ಯರಾಜ್ಯ ದೊಡನೆಯೂ ಪ್ರಸಿದ್ಧವಾಗಿದ್ದವು. ಅಹಮದಾಬಾದ್ ಹಾಗೂ, ಖಾರ್‌ಗಳಲ್ಲಿನ ರಾಜ್ಯಪಾಲ ಆಗಿದ್ದ ಅಲ್ಲಾವುದ್ದೀನನು ದೇವಗಿರಿಯ ಮೇಲೆ ಕ್ರಿ.ಶ. ೧೨೯೬ ರಲ್ಲಿ ದಂಡೆತ್ತಿ ಬಂದು ಅಸಾಧಾರಣ ಸಂಪದವನ್ನು ಸೂರೆಮಾಡಿದ. ನಂತರ ಬಹುಬೇಗನೆ ದೆಹಲಿಯ ಸಿಂಹಾಸನವನ್ನೂ ಆಕ್ರಮಿಸಿ ಸಾಮ್ರಾಟನಾದ. ಕ್ರಿ.ಶ. ೧೩೦೩ ರಲ್ಲಿ ಆಂಧ್ರದೇಶದ ಮೇಲೆ ಧಾಳಿಮಾಡಿದರೂ ನಿಷ್ಫಲವಾಗಿ ಹಿಂದಿರುಗಬೇಕಾಯಿತು. ನಂತರ ಕ್ರಿ.ಶ. ೧೩೦೯ ರಲ್ಲಿ ತನ್ನ ಸೇನಾನಿ ಮಲ್ಲಿಕ್‌ಕಾಫರ್‌ನ ನೇತೃತ್ವದಲ್ಲಿ ಮತ್ತೆ ದಂಡು ಕಳುಹಿಸಿದ. ಮಲ್ಲಿಕಾಫರನು ಕಾಕತೀಯ ರಾಜಧಾನಿ ಓರಂಗಲ್ ಅನ್ನು ಆಕ್ರಮಿಸಿ ರಾಜ ಪ್ರತಾಪರುದ್ರದೇವನಿಂದ ಅಪಾರವಾದ ಐಶ್ವರ್ಯವನ್ನು ವಶಪಡಿಸಿಕೊಂಡ. ನಂತರ ದಕ್ಷಿಣದ ಹೊಯ್ಸಳ ರಾಜಧಾನಿಯನ್ನು ಮುತ್ತಿ ಅದನ್ನು ಲೂಟಿ ಮಾಡಿದ. ಆಮೇಲೆ ಪಾಂಡ್ಯ ರಾಜಧಾನಿಯನ್ನು ಬಳಸಿ ಸೂರೆಗೈದ. ಕ್ರಿ.ಶ. ೧೩೧೦ ರಲ್ಲಿ ಅಗಣಿತ ಸಂಪತ್ತಿನೊಡನೆ, ಅವನು ಹಿಂದಿರುಗಿದ. ತಿರುಮಲೆ - ತಿರುಪತಿ ಪ್ರಾಂತ್ಯಗಳು ಅವನ ಆಕ್ರಮಣದ ಹಾದಿಯಲ್ಲಿ ಇಲ್ಲದ್ದರಿಂದ ಉಳಿದು ಹೋದವು.

ಶ್ರೀರಂಗದಲ್ಲಿನ ಶ್ರೀರಂಗನಾಥಸ್ವಾಮಿ ಆಲಯದ ಪರಂಪರೆಯನ್ನು ಚಿತ್ರಿಸುವ 'ಕೋಯಿಲ್ ಒಳುಗು' ಈ ಕಾಲದಲ್ಲಿ ನಡೆದ ಒಂದು ಘಟನೆಯನ್ನು ವಿವರಿಸುತ್ತದೆ. ಕ್ರಿ.ಶ. ೧೩೨೭ ರಲ್ಲಿ ತನ್ನ ದಕ್ಷಿಣದ ದಂಡಯಾತ್ರೆಯಲ್ಲಿ ಮಲ್ಲಿಕಾಫರನು ಶ್ರೀರಂಗದ ಆಸುಪಾಸಿನಲ್ಲಿ ಬಂದಿದ್ದ. ಆಗ ಸ್ಥಳೀಯರು ಆಲಯದ ವಾರ್ಷಿಕ ಉತ್ಸವವನ್ನು ನಡೆಸುತ್ತಲಿದ್ದದ್ದರಿಂದ ಅವರಿಗೆ ತಿಳಿದುಬಂದ ಈ ವಿಷಯವನ್ನು ತೀವ್ರವಾಗಿ ಪರಿಗಣಿಸಲಿಲ್ಲ. ಆದರೆ ಅವನು ಬಹು ಸಮೀಪಕ್ಕೆ ಬಂದಾಗ ವಿಷಯದ ಗಂಭೀರತೆಯನ್ನರಿತ ಅವರು ಹಲವು ತುರ್ತು ಕ್ರಮಗಳನ್ನು ಕೈಗೊಂಡರು. ಆಲಯದ ಗರ್ಭಗುಡಿಯನ್ನು ಮುಚ್ಚಿ, ಆಭರಣಗಳನ್ನು ಬಚ್ಚಿಡಲಾಯಿತು. ಪಿಳ್ಳೈ ಲೋಕಾಚಾರ್ಯ ಮತ್ತಿತರ ಭಕ್ತರು ಶ್ರೀರಂಗನಾಥನ ಉತ್ಸವ ವಿಗ್ರಹವನ್ನು ಶ್ರೀರಂಗದಿಂದ ಹೊರಕ್ಕೆ ಸಾಗಿಸಿ, ಸ್ಥಳದಿಂದ ಸ್ಥಳಕ್ಕೆ ಸಾಗಿಸುತ್ತ ಕಡೆಗೆ ತಿರುಮಲೆಯನ್ನು ತಲುಪಿದರು. ಇಲ್ಲಿ ಆ ಮೂರ್ತಿಯನ್ನು ಬಹುಕಾಲ ಇಡಲಾಗಿದ್ದಿತು. ಕೋಯಿಲ್ ಒಳುಗು ಹೇಳುವ ಕಾಲ ಮಾತ್ರ ತಪ್ಪು - ಕಾರಣ ಮಲ್ಲಿಕಾಫರನ ದಂಡಯಾತ್ರೆ ನಡೆದದ್ದು ಕ್ರಿ. ಶ. ೧೩೦೯ - ೧೦ ರಲ್ಲಿ; ಕ್ರಿ. ಶ. ೧೩೨೭ ರಲ್ಲಿ ಅಲ್ಲ. ಈ ಆಲಯಚರಿತ್ರೆಯಲ್ಲಿ ನಡೆದ ಘಟನೆಯ ಕಾಲವನ್ನು ಕ್ರಿ.ಶ. ೧೩೧೦ ಎನ್ನಬೇಕು.

ಮಲ್ಲಿಕಾಫರನು ದೆಹಲಿಗೆ ಹಿಂದಿರುಗಿದ ನಂತರದಲ್ಲಿ ದಕ್ಷಿಣದ ಹೈಂದವ ಸಾಮ್ರಾಜ್ಯಗಳ ತೊಂದರೆಗಳು ತೀರಲಿಲ್ಲ. ದೆಹಲಿಯ ಸಿಂಹಾಸನ ಖಿಲ್ಜಿಗಳಿಂದ ತೊಗ್‌ಲಖರಿಗೆ ಸೇರಿತು. ಕ್ರಿ.ಶ. ೧೩೨೧ ರಲ್ಲಿ ತನ್ನ ಮಗ ಉಲಗ್‌ಖಾನನ ನೇತೃತ್ವದಲ್ಲಿ ಒಂದು ಸೈನ್ಯವನ್ನು ಕಾಕತೀಯರ ಮೇಲೆ ದಂಡೆತ್ತಿ ಹೋಗಲು ಘಿಯಾಸುದ್ದೀನನು ಕಳುಹಿಸಿದ. ಆಂಧ್ರದ ಸೇನಾನಿಗಳು ತೀವ್ರ ವಿರೋಧವನ್ನೊಡ್ಡಿ, ದಂಡನ್ನು ಹಿಮ್ಮರಳಿಸಿದರು. ಉಲಗ್‌ಖಾನನು ಕ್ರಿ.ಶ. ೧೩೨೩ ರಲ್ಲಿ ಕಾಕತೀಯರು ಯಾವುದೇ ಸಿದ್ಧತೆಯನ್ನೂ ನಡೆಸದೆ ಇದ್ದಾಗ, ಪುನಃ ಧಾಳಿಯನ್ನು ಆರಂಭಿಸಿದ. ಯುದ್ಧ ಕೋಲಾಹಲಭರಿತವಾಗಿ ಕಾಕತೀಯರ ರಾಜ ಸೆರೆಯಾಳಾದ. ಕಾಕತೀಯರ ಮೇಲಣ ವಾರಂಗಲ್ ಯುದ್ಧದ ನಂತರ ಸೈನ್ಯವು ಕರ್ನೂಲು ಕಡಪಗಳನ್ನು ಮುತ್ತಿತು. ಉಲಗ್‌ಖಾನ್‌ನು ಪೂರ್ವದ ನೆಲ್ಲೂರು ಪಶ್ಚಿಮದ ಕ್ವಿಲಾನ್ ನಡುವಣ ಮಲಬಾರನ್ನು ಹಿಡಿದು, ಆಂಧ್ರ ಒರಿಸ್ಸಾಗಳ ತೀರಪ್ರದೇಶದಿಂದ ದೆಹಲಿಗೆ ಹಿಂದಿರುಗಿದ. ಹೀಗಾಗಿ ಎರಡನೆಯ ಬಾರಿಯೂ ತಿರುಪತಿ - ತಿರುಮಲೆಗಳು ಆಕ್ರಮಣಕಾರರ ಹಾದಿಯಲ್ಲಿಲ್ಲದೆ ಉಳಿದುಹೋಯಿತು.

ಉಲಗ್‌ಖಾನನು ತಾನು ಆಕ್ರಮಿಸಿದ ಪ್ರದೇಶಗಳಲ್ಲಿ ಸಮರ್ಥರಾದ ರಾಜಪ್ರತಿನಿಧಿಗಳನ್ನು ನೇಮಿಸಿದ. ದೆಹಲಿಗೆ ಹಿಂದಿರುಗಿದ ನಂತರ ತನ್ನ ತಂದೆಯನ್ನು ಹತಗೈದು ಮಹಮದ್ ಬಿನ್ ತೊಗ್ಲಕ್ ನಾಮಧಾರಿಯಾಗಿ ಸಿಂಹಾಸನ ವನ್ನೇರಿದ. ಆ ನಂತರ ದಕ್ಷಿಣದ ರಾಜ್ಯಗಳವರು ತಮ್ಮ ಈ ಪರಾಧೀನತೆಯನ್ನು ತಪ್ಪಿಸಿಕೊಳ್ಳಲು ಪ್ರಯತ್ನಿಸಿದರು. ಕಾಕತೀಯ ಪ್ರತಾಪರುದ್ರನ ಸೇನಾನಿಗಳು, ಪ್ರಜೆಗಳನ್ನು ಸೇರಿಸಿಕೊಂಡು ತಮ್ಮ ಮೇಲಣ ಸುಲ್ತಾನನ ರಾಜಪ್ರತಿನಿಧಿಗಳನ್ನು ಪದಚ್ಯುತಗೊಳಿಸಿ ಓಡಿಸಿದರು. ಹೀಗಾಗಿ ಆಂಧ್ರದ ತೀರಪ್ರದೇಶ, ತೆಲಂಗಾಣ, ರಾಯಲಸೀಮೆಗಳು ಸ್ವತಂತ್ರವಾದವು. ಉಲಗ್‌ಖಾನನು ಓರುಗಲ್ಲನ್ನು ಆಕ್ರಮಿಸಿದಾಗ ತಲೆ ತಪ್ಪಿಸಿಕೊಂಡವರಲ್ಲಿ, ಸಂಗಮ ವಂಶದವರೂ, ಕಾಕತೀಯ ಪ್ರತಾಪರುದ್ರನ ಕೋಶಾಧಿಕಾರಿಗಳೂ ಆಗಿದ್ದ ಹರಿಹರ, ಬುಕ್ಕ ಸೋದರರೂ ಇದ್ದರು. ಇವರಿಬ್ಬರೂ ತುಂಗಭದ್ರೆಯ ದಡದಲ್ಲಿದ್ದ ಕಿರುರಾಜ್ಯ ಕಂಪಿಲದಲ್ಲಿ ಆಶ್ರಯಪಡೆದರು. ಕಂಪಿಲರಾಯನ ಮೇಲೆ ಮಹಮದ್ ಬಿನ್ ತೊಗ್‌ಲಖನು ಕ್ರಿ. ಶ. ೧೩೨೭ ರಲ್ಲಿ ಒಂದು ಸೈನ್ಯವನ್ನು ಕಳುಹಿಸಿದನು. ಕಂಪಿಲರಾಯನನ್ನು ಕೊಂದು ಹಲವರನ್ನು ಸೆರೆಹಿಡಿಯಲಾಯಿತು. ಕಂಪಿಲ ರಾಜ್ಯವನ್ನಾಳಲು ರಾಜ ಪ್ರತಿನಿಧಿಯೋರ್ವನ ನೇಮಕವಾಯಿತು. ಆದರೆ ಕೆಲವೇ ದಿನಗಳಲ್ಲಿ ಸ್ಥಳೀಯರು ದಂಗೆಯೆದ್ದು ರಾಜ ಪ್ರತಿನಿಧಿಯನ್ನು ಓಡಿಸಿದರು. ದೆಹಲಿಗೆ ಹೊರಟ ಸೆರೆಯಾದವರಲ್ಲಿ ಹರಿಹರ ಬುಕ್ಕರೂ ಇದ್ದು, ಸುಲ್ತಾನನು ಹರಿಹರನನ್ನು ರಾಜಪ್ರತಿನಿಧಿಯನ್ನಾಗಿಯೂ ಬುಕ್ಕನನ್ನು ಸೇನಾನಿಯಾಗಿಯೂ ಮಾಡಿ ಕೈತಪ್ಪಿದ ಕಂಪಿಲರಾಜ್ಯವನ್ನು ಮರಳಿ ಪಡೆಯಲು ಕಳುಹಿಸಿದ. ಈ ಸೋದರರು ದಂಗೆಯನ್ನಡಗಿಸಿ, ಇಡೀ ರಾಯಲಸೀಮೆಯ ಪ್ರಾಂತ್ಯದಲ್ಲಿ ಶಾಂತಿಯನ್ನು ಸ್ಥಾಪಿಸಿದರು. ನಂತರ ಸಂತ ವಿದ್ಯಾರಣ್ಯರ ಸಂಪರ್ಕಕ್ಕೆ ಬಂದ ಇವರು ಅವರ ಸ್ಫೂರ್ತಿಯಿಂದ ಒಂದು ಹೊಸ ಸಾಮ್ರಾಜ್ಯವನ್ನು ಕಟ್ಟಿ ಹಿಂದೂ ಧರ್ಮ, ಸಂಸ್ಕೃತಿಗಳನ್ನು ವಿಧರ್ಮೀಯರ ಹೊಡೆತಗಳಿಂದ ರಕ್ಷಿಸಲು ಮುಂದಾದರು. ಹೀಗೆ ಕ್ರಿ. ಶ. ೧೩೩೬ ರಲ್ಲಿ ತುಂಗಭದ್ರೆಯ ದಕ್ಷಿಣ ದಡದಲ್ಲಿ ವಿಜಯನಗರ ವೆಂಬ ನಗರವನ್ನು ಸ್ಥಾಪಿಸಿ, ಅದನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ತಮ್ಮ ಸ್ವಾತಂತ್ರ್ಯವನ್ನು ಘೋಷಿಸಿದರು. ಸುಲ್ತಾನನು ತೀವ್ರವಾದ ಇತರ ಸಮಸ್ಯೆಗಳ ಒತ್ತಡದಲ್ಲಿದ್ದುದರಿಂದ ಹರಿಹರ ಬುಕ್ಕರ ಅವಿಧೇಯತೆಯನ್ನು ತಡೆಯಲು ಯಾವ ಕ್ರಮವನ್ನೂ ಕೈಕೊಳ್ಳಲಾಗಲಿಲ್ಲ.

(ಮುಂದಿನ ಸಂಚಿಕೆಯಲ್ಲಿ -

- ವಿಜಯನಗರದ ರಾಯರು.)






# ನವಜೀವನ ಅಂಧರ ಸಹಾಯ ಕೇಂದ್ರ (ನೋಂ)

## (ವೃದ್ಧರ, ಅಂಧರ ಉಚಿತ ಆವಾಸ ಕೇಂದ್ರ)

## 2-21 ಅ. ಸಪ್ತಗಿರಿ ಆಶ್ರಮ

## ತಿರುಚಾನೂರು - ತಿರುಪತಿ - 517 503.

# ಮ ನ ವಿ

ಕಂಚಿಕಾಮಕೋಟಿ ಪೀಠದ ಶ್ರೀ ಶಂಕರಾಚಾರ್ಯರ ವಿಶೇಷ ಅನುಗ್ರಹದಿಂದ ಕಳೆದ 16 ವರ್ಷದಿಂದ ನವಜೀವನ ಆಶ್ರಮ ನೇತ್ರಹೀನರಿಗೆ ವೃದ್ಧರಿಗೆ ಅನೇಕ ಸಹಾಯ ಕಾರ್ಯಗಳನ್ನು ನಿರ್ವಹಿಸುತ್ತಿದೆ.

**ದಾನಗಳಲ್ಲಿ ಶ್ರೇಷ್ಠದಾನ ಅನ್ನದಾನ :** ಎಲ್ಲ ದಾನಗಳಲ್ಲೂ ಅನ್ನದಾನ ಶ್ರೇಷ್ಠವೆಂದು ಪುರಾಣಗಳಲ್ಲಿ ಹೇಳಲ್ಪಟ್ಟಿದೆ. ಅದರಲ್ಲೂ ತಿರುಪತಿ, ರಾಮೇಶ್ವರ ಕಾಶಿ ಮೊದಲಾದ ಪುಣ್ಯಸ್ಥಳಗಳಲ್ಲಿ ಮಾಡುವ ಅನ್ನದಾನದಿಂದ ದಾತರಿಗೆ ದೊಡ್ಡ ಪುಣ್ಯಫಲ ಲಭಿಸುತ್ತದೆ.

**ನಾರಾಯಣಸೇವೆ :** ತಿರುಪತಿಯ ನವಜೀವನ ಆಶ್ರಮದಲ್ಲಿ ನಾರಾಯಣ ಸೇವೆಯಾಗಿ ನಿತ್ಯವೂ ಮೂರುಹೊತ್ತು ದಾತರ ನೆರವಿನಿಂದ ನೇತ್ರಹೀನರಿಗೆ, ವೃದ್ಧರಿಗೆ, ಅನಾಥರಿಗೆ ಅನ್ನದಾನ ನಡೆಯುತ್ತಿದೆ. ಒಂದು ದಿನದ ಅನ್ನದಾನಕ್ಕೆ ಸುಮಾರು ರೂ. 500/- ವೆಚ್ಚವಾಗುತ್ತಿದೆ. ದಯೆಯುಳ್ಳ ದಾನಿಗಳು ತಮ್ಮ ಹುಟ್ಟಿದ ದಿನ, ವಿವಾಹದ ದಿನ, ಮಕ್ಕಳ ಜನ್ಮದಿನ, ಅಥವಾ ಕೀರ್ತಿಶೇಷರಾದವರ ಪುಣ್ಯತಿಥಿಯಯಂದು ಒಂದು ದಿನದ ಅನ್ನದಾನಕ್ಕೆ ರೂ. 500/- ವಂತಿಗೆಯನ್ನು ನೀಡಿ ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀ ಅಮ್ಮನವರ ಆಶೀರ್ವಾದ ಹೊಂದಬೇಕೆಂದು ಕೋರುತ್ತೇವೆ.

ಅನ್ನದಾನ ಮಾಡುವ ದಾತರ ಗೋತ್ರನಾಮಗಳೊಡನೆ ಶ್ರೀ ವೆಂಕಟೇಶ್ವರಸ್ವಾಮಿ, ಅಲಮೇಲು ಮಂಗಮ್ಮವರಲ್ಲಿ ಪ್ರಾರ್ಥನೆ ಸಲ್ಲಿಸಿ ಪ್ರಸಾದವನ್ನು ಪೋಸ್ಟ್ ಮೂಲಕ ಕಳುಹಿಸಲಾಗುವುದು. ದಾತರು ತಮ್ಮ ವಂತಿಗೆಗಳನ್ನು ಚೆಕ್, ಡಿ.ಡಿ., ಎಂ.ಓ. ಗಳ ಮೂಲಕ ನವಜೀವನ ಬ್ಲೈಂಡ್ ರಿಲೀಫ್‌ಸೆಂಟರ್ ತಿರುಪತಿ - ಇವರ ಹೆಸರಿಗೆ ಕಳುಹಿಸಬೇಕೆಂದು ಕೋರುತ್ತೇವೆ.

|| ಶ್ರೇಯೋ ಭೂಯಾತ್ ಸಕಲ ಜನಾನಾಮ್ ||


ಫೋನ್ - 25992,
ನವಜೀವನ ಅಂಧರ ಸಹಾಯಕೇಂದ್ರ,
ಸಪ್ತಗಿರಿ ಆಶ್ರಮ - ತಿರುಚಾನೂರು,
ತಿರುಪತಿ - 517 503

ಮಾನವ - ಮಾಧವ ಸೇವೆಯಲ್ಲಿ
**ಸ್ವಾಮಿ ಶ್ರೀಧರ ಆಚಾರ್ಯ**
ಸಂಸ್ಥಾಪಕರು / ಅಧ್ಯಕ್ಷರು.

# "ಶ್ರೀ ಭಾಷ್ಯ"ದ ವ್ಯಾಖ್ಯಾನಗಳು

---ವಿದ್ವಾನ್ 'ರಘುಸುತ'.

ಯಾಮುನರ ಇಷ್ಟಾರ್ಥಗಳಲ್ಲಿ ವಿಶಿಷ್ಟಾದ್ವೈತ ತ್ತಾ ಬ್ರಹ್ಮಸೂತ್ರಗಳ ಭಾಷ್ಯವನ್ನು ರಚಿಸಬೇಕೆಂಬುದು ಬಹಳ ಮುಖ್ಯವಾದುದು. ಅವರ ಜೀವಿತ ಕಾಲದಲ್ಲಿ ಇದು ನೆರವೇರಲಿಲ್ಲ. ಅದರಿಂದ ತಮ್ಮ ಮುಂದಿನ ಪೀಳಿಗೆಯವರು ಈ ಇಷ್ಟಾರ್ಥವನ್ನು ನೆರವೇರಿಸಲಿ ಎಂಬ ಭಾವನೆ ಅವರಿಗೆ ಇತ್ತು. ಯಾಮುನರ ಚರಮವಿಗ್ರಹ ದರ್ಶನ ಮಾಡಿದ ಆಚಾರ್ಯ ರಾಮಾನುಜರು ಈ ವಿಷಯವನ್ನು ತಿಳಿದು, ಯಾಮುನರ ಮನೋಭೀಷ್ಟವನ್ನು ಪೂರ್ಣಗೊಳಿಸುವುದಾಗಿ ಪ್ರತಿಜ್ಞೆ ಮಾಡಿದ್ದರಿಂದ, ಯಾಮುನರ ಸಂಕುಚಿತ ಹಸ್ತಾಂಗುಳಿತ್ರಯವು ವಿಮೋಚನೆಗೊಂಡಿತು. ಇದರಿಂದ ಯಾಮುನರ ಶಿಷ್ಯರು ಆಶ್ಚರ್ಯಗೊಂಡು, ಸಂತೋಷಗೊಂಡು, ಯಾಮುನರಂತೆ ರಾಮಾನುಜರೂ ಕೂಡ ದರ್ಶನ ಸ್ಥಾಪಕಾಚಾರ್ಯರೆಂದು ನಿರ್ಧರಿಸಿದರು.

ತಾವು ಯಾಮುನರಿಗೆ ಕೊಟ್ಟ ಮಾತನ್ನು ನೆರವೇರಿಸಲು ಅದುವರೆವಿಗೆ ಉಳಿದಿದ್ದ ಬ್ರಹ್ಮಸೂತ್ರಗಳ ಬೋಧಾಯನ ವೃತ್ತಿಯನ್ನು ಕೂರೇಶರ ಮುಖಾಂತರ ಪಡೆದು ಅದರ ಆಧಾರದ ಮೇಲೆ 'ಶ್ರೀ ಭಾಷ್ಯ' ಎನ್ನುವ ಬ್ರಹ್ಮಸೂತ್ರಗಳ ವ್ಯಾಖ್ಯಾನವನ್ನು ಆಚಾರ್ಯ ರಾಮಾನುಜರು ರಚಿಸಿದರು. ಈ ಗ್ರಂಥವು ವಿಶಿಷ್ಟಾದ್ವೈತ ತತ್ವಕ್ಕೆ ಆಧಾರ ಭೂತವಾಗಿದ್ದು, ಇಂದಿನವರೆಗೂ ಜನಾದರಣೀಯವಾಗಿ ಉಳಿದಿದೆ.

ಶ್ರುತಿ, ಸ್ಮೃತಿ, ಇತಿಹಾಸ, ಪುರಾಣ ಪ್ರಮಾಣಗಳನ್ನು ಅನುಸರಿಸಿ ಹಾಗೂ ಪೂರ್ವಾಚಾರ್ಯರಾದ ಬೋಧಾಯನ, ಟಂಕ, ದ್ರಮಿಡ, ಗುಹದೇವ, ಕಪರ್ದಿ, ಭಾರುಚಿ, ಭರ್ತೃಮಿಶ್ರ, ಭರ್ತೃ ಪ್ರಪಂಚ, ನಾಥಮುನಿ, ಯಾಮುನರ ಮುಖಾಂತರ ಪ್ರವರ್ತಿಸಲ್ಪಟ್ಟ ಸಿದ್ಧಾಂತವನ್ನು ಅನುಸರಿಸಿ ಶ್ರೀಮದ್ರಾಮಾನುಜರು (ಕ್ರಿ. ಶ. ೧೦೧೭-೧೧೩೭) ಬ್ರಹ್ಮಸೂತ್ರಗಳಿಗೆ ರಚಿಸಿದ 'ಶ್ರೀ ಭಾಷ್ಯ' ವ್ಯಾಖ್ಯಾನವು ಚಿರಯಶಸ್ಸನ್ನು ಪಡೆದು, ಜಗದ್ವಿಖ್ಯಾತವಾಗಿದೆ.

ಮುಂದಿನ ನೂರಾರು ಜ್ಞಾನಭಿಕ್ಷುಗಳಿಗೆ ಈ ಕೃತಿಯು ದಾರಿದೀಪವಾಗಿದೆ. ಇಂತಹ ಜ್ಞಾನಿಗಳು, ವಿದ್ವಾಂಸರು ಈ ಕೃತಿಯಲ್ಲಿ ತಾವು ಕಂಡುದುದನ್ನು, ತಾವು ಪಡೆದ ಬೆಳಕನ್ನು ಗ್ರಂಥರೂಪದಲ್ಲಿ ರಚಿಸಿ, ಪ್ರಕಟಿಸಿದ್ದಾರೆ. ಇಂತಹ ವ್ಯಾಖ್ಯಾನಗಳ ಒಂದು ಪ್ರವಾಹವೇ ಹರಿದು ಬರುತ್ತಿರುವುದನ್ನು ಗಮನಿಸಿದರೆ, ಯಾರಿಗಾದರೂ ಆಶ್ಚರ್ಯವಾಗದಿರದು. ಇಂತಹ ವ್ಯಾಖ್ಯಾನಗಳು, ಪರಿಚಯ ಗ್ರಂಥಗಳು ಸಂಸ್ಕೃತ, ಭಾರತೀಯ ಭಾಷೆಗಳೇ ಅಲ್ಲದೆ ಐರೋಪ್ಯ ಭಾಷೆಗಳಲ್ಲಿಯೂ ಕೂಡ ಬೆಳಕು ಕಂಡಿರುವುದು ಈ ಕೃತಿಯ ಜನಪ್ರಿಯತೆ ಹಾಗೂ ಹೆಗ್ಗಳಿಕೆಯನ್ನು ಪ್ರದರ್ಶಿಸುತ್ತದೆ. ಆಚಾರ್ಯ ರಾಮಾನುಜರ ಪಾಂಡಿತ್ಯಕ್ಕೆ ಈ ಗ್ರಂಥವು ಉತ್ಕೃಷ್ಟ ಉದಾಹರಣೆಯಾಗಿದೆ.

೧. ಆಚಾರ್ಯ ರಾಮಾನುಜರ ಸೋದರಳಿಯಿಂದಿರಾದ (ರಾಮಾನುಜರ ಅಕ್ಕ ಮಂಗಲವಲ್ಲಿಯ ಮಗ) (೨ನೇ) ರಾಮಮಿಶ್ರರು ಆಚಾರ್ಯರಲ್ಲಿಯೇ ಶ್ರೀಭಾಷ್ಯಾದಿಗಳಲ್ಲಿ ಕಾಲಕ್ಷೇಪ ಮಾಡಿ, ಅವರ ಅಪೇಕ್ಷೆಯಂತೆ 'ಶ್ರೀ ಭಾಷ್ಯವಿವರಣ' ಎನ್ನುವ ಗ್ರಂಥವನ್ನು ಬರೆದು ಗುರುಗಳಿಂದಲೇ ಹೊಗಳಿಸಿಕೊಂಡಿದ್ದಾರೆ.

೨. 'ವಕುಳಾಭರಣ ಭಕ್ತಿಕಿಂಕರರು' ಎಂದು ಕರೆಯಿಸಿಕೊಂಡಿರುವ ವರದನಾರಾಯಣ ಭಟ್ಟಾರಕ ಎನ್ನುವವರು 'ವೇದಾಂತ ನ್ಯಾಯ ಸುದರ್ಶನಂ' ಎನ್ನುವ ಶ್ರೀ ಭಾಷ್ಯ ವ್ಯಾಖ್ಯಾನವನ್ನು ಕ್ರಿ.ಶ. ೧೨೨೦ ರಲ್ಲಿ ರಚಿಸಿದರು. ನ್ಯಾಯ ಪದ್ಧತಿಯನ್ನು ಅನುಸರಿಸಿ, ವಿಶಿಷ್ಟಾದ್ವೈತ ತತ್ವವನ್ನು ಇದರಲ್ಲಿ ನಿರೂಪಿಸಲಾಗಿದೆ. ಈ ವ್ಯಾಖ್ಯಾನವನ್ನು ಶ್ರೀ ವೇದಾಂತ ದೇಶಿಕರು ಪ್ರಮಾಣವಾಗಿ ಸ್ವೀಕರಿಸಿರುವುದರಿಂದ ಇದರ ಪ್ರಾಮುಖ್ಯತೆಯು ಸ್ಪಷ್ಟವಾಗುತ್ತದೆ.



೩. ಕ್ರಿ.ಶ. ೧೨ ನೇ ಶತಮಾನದ 'ಮೇಘನಾದಾದಿ ಸೂರಿ' ಎನ್ನುವ ತಾರ್ಕಿಕರು 'ನಯದ್ಯುಮಣಿ' ಎನ್ನುವ ಹೆಸರಿನ ಶ್ರೀಭಾಷ್ಯ ವ್ಯಾಖ್ಯಾನವನ್ನು ರಚಿಸಿದರು. ಶ್ರೀಭಾಷ್ಯ ದಿವ್ಯಪ್ರಬಂಧ, ರಹಸ್ಯತ್ರಯಗಳ ಬಗ್ಗೆ ಇವರು ಉತ್ತಮವಾಗಿ ವಿವರಣೆ ನೀಡುತ್ತಿದ್ದರು. 'ನಯಪ್ರಕಾಶಿಕಾಚಾರ್ಯ' ಎಂಬ ಬಿರುದೂ ಇವರಿಗಿದೆ. 'ನಯದ್ಯುಮಣಿ'ಯು ೧೨ ಭಾಗಗಳನ್ನು ಹೊಂದಿದೆ. ಈ ಕೃತಿಯು ರಾಮಾನುಜ ತತ್ವವನ್ನು ಸಂಗ್ರಹವಾಗಿ ವಿವರಿಸುತ್ತದೆ. 'ನಯ ಪ್ರಕಾಶಿಕಾ' ಎನ್ನುವ ಮತ್ತೊಂದು ವ್ಯಾಖ್ಯಾನ, 'ಶ್ರೀಭಾಷ್ಯ ಭಾವಪ್ರದೋಧನಂ' ಎನ್ನುವ ಮತ್ತೊಂದು ವ್ಯಾಖ್ಯಾನ - ಇವರ ಪಾಂಡಿತ್ಯದ ಒರೆಗಲ್ಲುಗಳಾಗಿವೆ. ಮೊದಲೆರಡು ಮುದ್ರಣಗೊಂಡಿವೆ, ಮೂರನೆಯದು ಹಸ್ತಪ್ರತಿ ರೂಪದಲ್ಲಿ ಅಡಯಾರು ಗ್ರಂಥಾಲಯದಲ್ಲಿದೆ.

೪. 'ನಡಾದೂರಮ್ಮಾಳ್' (೧೧೬೫-೧೨೭೫) ಎಂದು ಕರೆಯಲ್ಪಡುವ ವಾತ್ಸವರದಾಚಾರ್ಯರು ಶ್ರೀಭಾಷ್ಯದ ಮೇಲೆ ಅದ್ಭುತ ವಿವರಣೆಯನ್ನು ನೀಡುತ್ತಿದ್ದವರು. 'ರಾಮಾನುಜ ಸಿದ್ಧಾಂತದ ಅತಿ ಶ್ರೇಷ್ಠ ಮೊದಲ ಪ್ರತಿಪಾದಕರು' ಎಂಬ ಹೆಗ್ಗಳಿಕೆಗೆ ಪಾತ್ರರಾದ ಇವರ ಪ್ರವಚನಗಳಿಂದ ಬಾಲಕರಾಗಿದ್ದ ವೇದಾಂತ ದೇಶಿಕರು ಹಾಗೂ ಶಿಷ್ಯ ಸುದರ್ಶನ ಸೂರಿಗಳು ತುಂಬಾ ಪ್ರಭಾವಿತರಾಗಿದ್ದಾರೆ. ಇವರ 'ತತ್ತ್ವಸಾರ' ಹಾಗೂ 'ತತ್ತ್ವನಿರ್ಣಯ' ಗಳು ಶ್ರೀಭಾಷ್ಯದ ಮೇಲಿನ ಅಪರೂಪದ ವ್ಯಾಖ್ಯಾನಗಳು.

೫. ಕೂರೇಶರ ಎರಡನೇ ಮಗ ಶ್ರೀರಾಮ ಪಿಳ್ಳೈರವರ ಮೊಮ್ಮಗ ಹಾಗೂ ದಿಗ್ವಿಜಯ ಭಟ್ಟರ ಮಗನಾದ ಸುದರ್ಶನಾಚಾರ್ಯ (೧೨೦೦-೧೨೭೫)ರು ಪ್ರಸಿದ್ಧ ವಿದ್ವಾಂಸರು. ಸುದರ್ಶನ ಭಟ್ಟ, ಸುದರ್ಶನ ಸೂರಿ, ವೇದವ್ಯಾಸ ಭಟ್ಟಾರ್ಯ, ವ್ಯಾಸಾರ್ಯ, ಶ್ರುತಿ ಪ್ರಕಾಶಿಕಾಚಾರ್ಯ ಎಂಬ ಹೆಸರುಗಳನ್ನು ಇವರು ಹೊಂದಿದ್ದರು. ಶ್ರೀಭಾಷ್ಯಕ್ಕೆ ಇವರು ಬರೆದ 'ಶ್ರುತ ಪ್ರಕಾಶಿಕೆ' ಎನ್ನುವ ವ್ಯಾಖ್ಯಾನವು ತುಂಬಾ ಅಪರೂಪವಾದ ಹಾಗೂ ವಿಶಿಷ್ಟಾದ್ವೈತದ ಆಧಾರ ಗ್ರಂಥ. ಈ ಕೃತಿಯ ಸಂಕ್ಷಿಪ್ತರೂಪವಾದ 'ಶ್ರುತ ಪ್ರದೀಪಿಕಾ' ಎಂಬ ಗ್ರಂಥವನ್ನೂ ಇವರು ರಚಿಸಿದ್ದಾರೆ. ಶ್ರುತಿ ಪ್ರಾಕಾಶಿಕೆ ಹಾಗೂ ಸುದರ್ಶನ ಸೂರಿಗಳ ಇಬ್ಬರು ಮಕ್ಕಳನ್ನು ವೇದಾಂತ ದೇಶಿಕರು ಮಹಮ್ಮದೀಯರ ಧಾಳಿಗಳಿಂದ ರಕ್ಷಿಸಿದರು.

೬. ವಿಶಿಷ್ಟಾದ್ವೈತ ಸಿದ್ಧಾಂತದ ರಕ್ಷಣೆ, ವ್ಯವಸ್ಥೆ, ಪ್ರವಚನ, ಪ್ರಚಾರಗಳಿಗಾಗಿ ತಮ್ಮ ಜೀವನವನ್ನೆ ಮುಡಿಪಾಗಿಟ್ಟ ವೇದಾಂತದೇಶಿಕರು (ಕ್ರಿ.ಶ. ೧೨೬೮ - ೧೩೬೯) ಸರ್ವತಂತ್ರ ಸ್ವತಂತ್ರ, ಕವಿತಾರ್ಕಿಕಸಿಂಹ, ವೇದಾಂತಚಾರ್ಯ ಎಂಬ ಬಿರುದುಗಳನ್ನು ಹೊಂದಿದ್ದವರು. ಇವರು 'ಅಧಿಕರಣ ದರ್ಪಣ' ಎನ್ನುವ ಹೆಸರಿನಲ್ಲಿ ಶ್ರೀ ಭಾಷ್ಯದ ವ್ಯಾಖ್ಯಾನವನ್ನು ಸಂಗ್ರಹವಾಗಿ ರಚಿಸಿದರು. ಇದು ಈಗ ದೊರೆಯುತ್ತಿಲ್ಲ. ಶ್ರೀ ಭಾಷ್ಯದಲ್ಲಿರುವ ವಿಷಯಗಳನ್ನು ಅಧಿಕರಣ ಕ್ರಮದಲ್ಲಿ ವಿವರಿಸುತ್ತಾ 'ಅಧಿಕರಣ ಸಾರಾವಳಿ' ಎನ್ನುವ ಮತ್ತೊಂದು ವ್ಯಾಖ್ಯಾನವನ್ನು ರಚಿಸಿದರು. ಇದಕ್ಕೆ 'ಅಧಿಕರಣ ಚಿಂತಾಮಣಿ' ಎನ್ನುವ ವ್ಯಾಖ್ಯಾನವೊಂದಿದೆ. ನಂತರದಲ್ಲಿ ಶ್ರೀ ಭಾಷ್ಯದಲ್ಲಿರುವ ಎಲ್ಲ ವಿಷಯಗಳ ಬಗ್ಗೆಯೂ ಚರ್ಚಿಸುತ್ತಾ 'ತತ್ತ್ವಟೀಕ' ಎನ್ನುವ ಹೆಸರಿನ ಮತ್ತೊಂದು ವ್ಯಾಖ್ಯಾನವನ್ನು ಇವರು ರಚಿಸಿದರು. ಇದು ಮುದ್ರಣಗೊಂಡಿದೆ.

೭. ವೇದಾಂತ ದೇಶಿಕರಿಗಿಂತಲೂ ಹಿಂದಿನವರಾದ ಸೇನೇಶ್ವರಾಚಾರ್ಯ ಎನ್ನುವವರು ಬ್ರಹ್ಮಸೂತ್ರಗಳ ಮೇಲಿನ ಭಾಷ್ಯದ ಬಗ್ಗೆ ರಚಿಸಿರುವ 'ಶಾರೀರಿಕ ನ್ಯಾಯಕಲಾಪ ಸಂಗ್ರಹ' ಎಂಬ ಕೃತಿಯು ಸುದರ್ಶನ ಸೂರಿಗಳ ಹಾಗೂ ವರದ ನಾರಾಯಣ ಭಟ್ಟಾರಕರ ಕೃತಿಗಳಿಗಿಂತಲೂ ಉತ್ತಮವಾಗಿದೆ - ಎಂಬುದು ವಿದ್ವನ್ಮಣಿಗಳ ಅಭಿಪ್ರಾಯ.

೮. ಕ್ರಿ. ಶ. ೧೫-೧೬ ನೇ ಶತಮಾನ ನಡುವೆ ಇದ್ದ ಕೌಶಿಕ ವರದಾಚಾರ್ಯರ ಮಕ್ಕಳಾದ 'ಚಂಪಕೇಶಾಚಾರ್ಯ' ಎನ್ನುವವರು 'ಲಘುತತ್ವ ಪ್ರಕಾಶಿಕಾ' ಎನ್ನುವ ಹೆಸರಿನ ಶ್ರುತಿಪ್ರಕಾಶಿಕೆಯ ವ್ಯಾಖ್ಯಾನವನ್ನು ರಚಿಸಿದ್ದಾರೆ. ೧೯೭೮ ರಲ್ಲಿ ಮದ್ರಾಸ್ ವಿಶ್ವವಿದ್ಯಾಲಯದವರು ಇದನ್ನು ಪ್ರಕಟಿಸಿದ್ದಾರೆ.

೯. ಕ್ರಿ. ಶ. ೧೫-೧೬ ನೇ ಶತಮಾನದ ಮಧ್ಯಕಾಲದಲ್ಲಿದ್ದ 'ವಾಧೂಲ ಶ್ರೀನಿವಾಸಾಚಾರ್ಯ' ಎನ್ನುವವರು 'ತುಳಿಕ' ಎನ್ನುವ ಹೆಸರಿನಲ್ಲಿ 'ಶ್ರುತ ಪ್ರಕಾಶಿಕೆ'ಯ ವ್ಯಾಖ್ಯಾನವನ್ನು ರಚಿಸಿದ್ದಾರೆ. ಇದೂ ಕೂಡ ಅಡಯಾರು ಗ್ರಂಥಾಲಯದಲ್ಲಿದೆ.

೧೦. ಶುದ್ಧ ಸತ್ವಾಚಾರ್ಯರ ಮಕ್ಕಳಾದ ಲಕ್ಷ್ಮಣಾಚಾರ್ಯರು 'ಗುರುಭಾವ ಪ್ರಕಾಶಿಕ' ಎನ್ನುವ ಶ್ರೀಭಾಷ್ಯ ವ್ಯಾಖ್ಯಾನವನ್ನು ರಚಿಸಿ, ಪ್ರಸಿದ್ಧಿಯನ್ನು ಪಡೆದಿದ್ದಾರೆ.

೧೧. ಕ್ರಿ. ಶ. ೧೫೦೯-೧೫೯೧ ರಲ್ಲಿದ್ದ ದೊಡ್ಡಯ್ಯಾಚಾರ್ಯ ಎನ್ನುವ ಮಹಾಚಾರ್ಯರು 'ಶ್ರೀ ಭಾಷ್ಯೋಪನ್ಯಾಸಃ' ಎನ್ನುವ ಗ್ರಂಥವನ್ನು ರಚಿಸಿದರು. ಅಂತೆಯೇ ಭಾಷ್ಯದ ಮುಖ್ಯ ವಿಷಯಗಳನ್ನು ತಿಳಿಸುತ್ತಾ 'ಅಧಿಕರಣಾರ್ಥ ಸಂಗ್ರಹಃ' ಎನ್ನುವ ಗ್ರಂಥವನ್ನೂ ಕೂಡ ರಚಿಸಿದರು.

೧೨. ಕ್ರಿ. ಶ. ೧೬ ನೇ ಶತಮಾನದ್ದ ತಾತದೇಶಿಕರ ಶಿಷ್ಯರಾದ ರಂಗರಾಮಾನುಜರು 'ಭಾವ ಪ್ರಕಾಶಿಕ' ಎನ್ನುವ ಹೆಸರಿನಲ್ಲಿ 'ಶ್ರುತಪ್ರಕಾಶಿಕೆ'ಯ ವ್ಯಾಖ್ಯಾನವನ್ನು ರಚಿಸಿದರು. ಇದೇ ಅಲ್ಲದೆ 'ಮೂಲಭಾವ ಪ್ರಕಾಶಿಕ', 'ಶಾರೀರಿಕ ಶಾಸ್ತ್ರಾರ್ಥ ದೀಪಿಕ' ಎನ್ನುವ ಗ್ರಂಥಗಳನ್ನೂ ಇವರು ರಚಿಸಿದರು. ಇವುಗಳಲ್ಲಿ ಮೊದಲನೆಯದು ಮುದ್ರಣಗೊಂಡಿದೆ. ಎರಡನೆಯದು ಹಸ್ತಪ್ರತಿ ರೂಪದಲ್ಲಿ ಅಡಯಾರು ಗ್ರಂಥಾಲಯದಲ್ಲಿದೆ.

೧೩. ಕ್ರಿ. ಶ. ೧೮-೧೯ ಶತಮಾನಗಳ ಮಧ್ಯಕಾಲದಲ್ಲಿ ಕೋಳಿಯಾಳಂ ರಂಗರಾಮಾನುಜ ಮುನಿಗಳು ಆನಂದಮಯಾಧಿಕರಣವನ್ನು ವಿವರಿಸುತ್ತಾ, 'ಪರಪಕ್ಷ ನಿರಾಕೃತಿ' ಎನ್ನುವ ಗ್ರಂಥವನ್ನು ರಚಿಸಿದರು. ಇದು ಮುದ್ರಣಗೊಂಡಿದೆ.

೧೪. ಕ್ರಿ.ಶ. ೧೮ನೇ ಶತಮಾನದಲ್ಲಿ ಸುರಪುರಂ ಶ್ರೀನಿವಾಸ ತಾತಾಚಾರ್ಯರ ಪುತ್ರರಾದ ವೆಂಕಟಾಚಾರ್ಯ ಎನ್ನುವವರು 'ಬ್ರಹ್ಮ ಸೂತ್ರ ಭಾಷ್ಯಸ್ಥ ಪೂರ್ವಪಕ್ಷ ಸಂಗ್ರಹಕಾರಿಕ' ಎನ್ನುವ ಗ್ರಂಥವನ್ನು ಬರೆದರು.

೧೫. ಇದೇ ಕಾಲಕ್ಕೆ ಸೇರಿದ ಸುರಪುರಂ ಶ್ರೀನಿವಾಸಾಚಾರ್ಯರು 'ಶ್ರೀಭಾಷ್ಯಸ್ಯ ಸಮೀಕ್ಷಾತ್ಕಮಧ್ಯಯನಮ್' ಎನ್ನುವ ರೀತಿಯಲ್ಲಿನ 'ತತ್ತ್ವ ಮಾರ್ತಾಂಡ' ಎನ್ನುವ ಗ್ರಂಥವನ್ನು ರಚಿಸಿದರು.

'ಅಥಾತೊ ಬ್ರಹ್ಮಜಿಜ್ಞಾಸಾ' ಎನ್ನುವ ಮೊದಲ ಬ್ರಹ್ಮಸೂತ್ರದಲ್ಲಿನ 'ಜಿಜ್ಞಾಸಾ' ಎನ್ನುವ ಪದವನ್ನು ಶ್ರೀಭಾಷ್ಯಾನುಸಾರ ವಿವರಿಸುತ್ತಾ 'ಜಿಜ್ಞಾಸಾ ದರ್ಪಣ' ಹೆಸರಿನ ಗ್ರಂಥವನ್ನು ಇವರು ರಚಿಸಿದ್ದಾರೆ.

'ನಾರಾಯಣ' ಪದದಲ್ಲಿರುವ 'ಣ' ತ್ವವನ್ನು ವಿವರಿಸುತ್ತಾ 'ಣ' ತ್ವದರ್ಪಣ' ಎನ್ನುವ ಹೆಸರಿನ ಗ್ರಂಥವೊಂದನ್ನು ಇವರು ರಚಿಸಿದ್ದಾರೆ.

'ಬ್ರಾಹ್ಮಣಃ ಜಿಜ್ಞಾಸಾ = ಬ್ರಹ್ಮಜಿಜ್ಞಾಸಾ' ಎನ್ನುವ ಕಡೆಯಲ್ಲಿ ಕರ್ಮಣಿ ಷಷ್ಟಿಯನ್ನು ಪ್ರತಿಪಾದಿಸುತ್ತಾ 'ಷಷ್ಟಿದರ್ಪಣ' ಎನ್ನುವ ಹೆಸರಿನ ಗ್ರಂಥವನ್ನು ಇವರು ರಚಿಸಿದ್ದಾರೆ. ಇವೆಲ್ಲವೂ ಮುದ್ರಣಗೊಂಡಿವೆ.

೧೬. ಕ್ರಿ.ಶ. ೧೮ ನೇ ಶತಮಾನದಲ್ಲಿ ಭೂತಪುರವಾಸಿಯಾದ 'ಶ್ರೀಶೈಲಯೋಗಿ' ಎನ್ನುವ ಖ್ಯಾತ ಹೆಸರನ್ನು ಹೊಂದಿರುವ ಶ್ರೀನಿವಾಸಾಚಾರ್ಯರು 'ಬ್ರಹ್ಮ' ಎನ್ನುವ ಪದವನ್ನು ವಿವರಿಸುತ್ತಾ 'ಬ್ರಹ್ಮಪದ ಶಕ್ತಿವಾದಃ' ಎನ್ನುವ ಗ್ರಂಥವನ್ನು ರಚಿಸಿದ್ದಾರೆ. ಇದು ಅಡಯಾರು ಗ್ರಂಥಾಲಯದಲ್ಲಿದೆ.

೧೭. ಕ್ರಿ.ಶ. ೧೮ ನೇ ಶತಮಾನದ ಶ್ರೀ ರಂಗನಾಥ ದೇಶಿಕರ ಮಕ್ಕಳೂ, ಶಿಷ್ಯರೂ ಆದ ಶ್ರೀ ಭಾಷ್ಯಂ ರಂಗಾಚಾರ್ಯರವರು 'ಶ್ರೀಭಾಷ್ಯಸಿದ್ಧಾಂತ ಸಾರಃ' ಎನ್ನುವ ಗ್ರಂಥವನ್ನು ಬರೆದರು. ಇದೂ ಕೂಡ ಅಡಯಾರು ಗ್ರಂಥಾಲಯದಲ್ಲಿದೆ.

೧೮. ಶ್ರೀ ರಾಮಾನುಜರ ಗುರುಗಳಲ್ಲಿ ಒಬ್ಬರಾದ ಶ್ರೀಶೈಲಪೂರ್ಣರ ವಂಶೀಯರಲ್ಲಿ ಒಬ್ಬರಾದ ಶಾತದೇಶಿಕರ ಮಕ್ಕಳಾದ 'ಶ್ರೀಶೈಲಸೂರಿ' ಎನ್ನುವವರು ಕ್ರಿ.ಶ. ೧೮ ನೇ ಶತಮಾನಕ್ಕೆ ಸೇರಿದವರು. ಇವರು 'ಶ್ರುತ ಪ್ರಕಾಶಿಕೆ' ಎನ್ನುವ ಗ್ರಂಥವನ್ನು ಬರೆದಿದ್ದಾರೆ. ಇದೂ ಕೂಡ ಅಡಯಾರ್ ಗ್ರಂಥಾಲಯದಲ್ಲಿದೆ.

೧೯. ೧೮ನೇ ಶತಮಾನಕ್ಕೆ ಸೇರಿದ ಕುಂಭಕೋಣ ನಿವಾಸಿಗಳಾದ ರಾಘವಾಚಾರ್ಯ ಎನ್ನುವವರು 'ಶಾರೀರಿಕಾರ್ಥ ಸಂಕ್ಷೇಪಃ' ಎನ್ನುವ ಗ್ರಂಥವನ್ನು ಬರೆದಿದ್ದಾರೆ.

೨೦. ಕ್ರಿ.ಶ. ೧೭೩೪-೧೭೬೬ ರ ಮೈಸೂರಿನ ಇಮ್ಮಡಿ ಕೃಷ್ಣರಾಜ ಒಡೆಯರ ದಳವಾಯಿಯೊಬ್ಬರ ತಮ್ಮನಾದ ವೀರರಾಜರ ಮಗನಾದ ಶುದ್ಧ ಸತ್ತ್ವಂ ರಾಮಾನುಜಾಚಾರ್ಯ ಎನ್ನುವವರು 'ಗುರು ಭಾವ ಪ್ರಕಾಶಿಕೆ' ಎನ್ನುವ ವ್ಯಾಖ್ಯಾನವನ್ನು ರಚಿಸಿದ್ದಾರೆ. ಇದೂ ಕೂಡ ಅಡಯಾರು ಗ್ರಂಥಾಲಯದಲ್ಲಿದೆ.

೨೧. ಕ್ರಿ.ಶ. ೧೮ನೇ ಶತಮಾನಕ್ಕೆ ಸೇರಿದ ಪ್ರತಿವಾದಿ ಭಯಂಕರ ವೆಂಕಟೇಶ ಪಂಡಿತರು ಎನ್ನುವವರು 'ಶಾರೀರಿಕ ದೀಪಿಕ' ಎನ್ನುವ ಗ್ರಂಥವನ್ನು ಬರೆದಿದ್ದಾರೆ.

೨೨. ವೀರರಾಘವದಾಸರು ಎನ್ನುವವರು 'ತಾತ್ಪರ್ಯ ದೀಪಿಕಾ' ಎನ್ನುವ ಗ್ರಂಥವನ್ನು ಬರೆದಿದ್ದಾರೆ.

೨೩. ಪರಕಾಲ ಸ್ವಾಮಿಗಳು 'ಮಿತ ಪ್ರಕಾಶಿಕೆ' ಎನ್ನುವ ಶ್ರೀ ಭಾಷ್ಯದ ಗೂಢಾರ್ಥಗಳನ್ನು ವಿವರಿಸುವ ಕೃತಿಯನ್ನು ರಚಿಸಿದ್ದಾರೆ.

೨೪. ಕ್ರಿ. ಶ. ೧೮೪೨ - ೧೯೨೮ ರ ನಡುವಿನಲ್ಲಿದ್ದ ಮುಡಂಬಿ ನರಸಿಂಹಾಚಾರ್ಯ ಎನ್ನುವವರು 'ಬ್ರಹ್ಮಸೂತ್ರ ಭಾಷ್ಯ' ಎನ್ನುವ ಗ್ರಂಥವೊಂದನ್ನು ರಚಿಸಿದ್ದಾರೆ.

೨೫. ಪಂಡಿತ ರಾಮಾಶಾಸ್ತ್ರಿಗಳಿಂದ ರಚಿತವಾಗಿರುವ 'ಶ್ರೀಭಾಷ್ಯ ವ್ಯಾಖ್ಯಾ' ಎನ್ನುವ ಗ್ರಂಥವು ಪಂಡಿತ್ ನ್ಯೂ ಸೀರೀಸ್ ಎನ್ನುವ ಮಾಲೆಯಲ್ಲಿ ಪ್ರಕಟವಾಗಿದೆ.

೨೬. 'ಶೇಷಾರ್ಯ' ಎಂದು ಕರೆಯಲ್ಪಡುವ ಅನಂತಾಚಾರ್ಯರವರು 'ಈಷತ್ಪತ್ಯಧಿಕರಣ ವಿಚಾರಃ' ಎನ್ನುವ ಗ್ರಂಥವನ್ನು ಬರೆದರು. ಇದು ಪ್ರಕಟಗೊಂಡಿದೆ.

೨೭. ಶ್ರೀಶೈಲ ಶ್ರೀನಿವಾಸಾಚಾರ್ಯರವರು ಶ್ರೀ ಭಾಷ್ಯವನ್ನು ಅನುವಾದ ಮಾಡುತ್ತಾ 'ವೇದಾಂತ ನ್ಯಾಯಮಾಲಿಕೆ' ಎನ್ನುವ ಗ್ರಂಥವನ್ನು ಬರೆದರು. ಇದೂ ಕೂಡ ಅಡಯಾರು ಗ್ರಂಥಾಲಯದಲ್ಲಿದೆ.

೨೮. ತ್ಯಕ್ಯ್ರಿ ವಾಧೂಲ ಶ್ರೀನಿವಾಸ ಪಂಡಿತರು 'ಶ್ರೀ ಭಾಷ್ಯ' ಹಾಗೂ 'ಶ್ರುತ ಪ್ರಕಾಶಿಕೆ'ಯನ್ನು ತಮಿಳಿಗೆ ಅನುವಾದ ಮಾಡಿದರು.

೨೯. ಕಂದಾಡೈ ಶೇಷಾಚಾರ್ಯರು ೧೯೨೨ ರಲ್ಲಿ 'ಆಂಧ್ರ ಶ್ರೀ ಭಾಷ್ಯ' ಎನ್ನುವ ಗ್ರಂಥವನ್ನು ತೆಲುಗಿನಲ್ಲಿ ರಚಿಸಿ, ಪ್ರಕಟಿಸಿದರು.

೩೦. ೨೦ ಶತಮಾನದಲ್ಲಿನ ನೀಲಮೇಘಶಾಸ್ತ್ರಿ ಎನ್ನುವವರೊಬ್ಬರು ವಿಶಿಷ್ಟಾದ್ವೈತ ತತ್ವದ ಅನುಸಾರ 'ಸೂತ್ರ ಭಾಷ್ಯ' ಎನ್ನುವ ಗ್ರಂಥವನ್ನು ಬರೆದರು.

೩೧. ೧೯ನೇ ಶತಮಾನಕ್ಕೆ ಸೇರಿದ ಅನಂತ ರಾಮ ಪಂಡಿತರು ಎನ್ನುವವರು 'ವೇದಾಂತಸಾರ ವ್ಯಾಖ್ಯಾ' 'ವೇದಾಂತಸಾರ ಪದ್ಯಮಾಲಾ' ಎನ್ನುವ ಗ್ರಂಥಗಳನ್ನು ರಚಿಸಿದರು.

೩೨. 'ಶ್ರೀನಿವಾಸ ರಾಘವದಾಸು' ಎಂಬ 'ಶಠ ಗೋಪ ರಾಮಾನುಜ ಯತಿ' ಎನ್ನುವವರು 'ಅಧಿಕರಣ ಕಲ್ಪತರು' ಎನ್ನುವ ವ್ಯಾಖ್ಯಾನವನ್ನು ಬರೆದಿರುವರು. ಇದು ಪ್ರಕಟಗೊಂಡಿದೆ.

೩೩. ಕ್ರಿ. ಶ. ೧೮೫೫ ರಲ್ಲಿ ಜನಿಸಿದ ಕಪಿಸ್ಥಲಂ ದೇಶಿಕಾಚಾರ್ಯ ಎನ್ನುವವರು 'ಶಾರೀರಾಧಿಕರಣ ರತ್ನಮಾಲಾ' ಎನ್ನುವ ಗ್ರಂಥವನ್ನು ರಚಿಸಿದರು. ಇದರ ತಮಿಳು ಅನುವಾದವೂ ಇದೆ.

೩೪. ಕೌಂಡಿನ್ಯ ವೆಂಕಟಾಚಾರ್ಯರ ಪುತ್ರರಾದ ಅಣ್ಣಯ್ಯಾಚಾರ್ಯ ಎನ್ನುವವರು ವಿಶಿಷ್ಟಾದ್ವೈತ ಮತಾನುಸಾರ 'ಬ್ರಹ್ಮಸೂತ್ರೋಪಸೂತ್ರ ಸಂಗ್ರಹ' ಎನ್ನುವ ಗ್ರಂಥವನ್ನು ರಚಿಸಿದ್ದಾರೆ.

೩೫. ಪಂಜಾಬೀ ಸುದರ್ಶನಾಚಾರ್ಯರು 'ಶ್ರೀ ಭಾಷ್ಯದ ಅನುಸಾರ 'ವಿಶಿಷ್ಟಾದ್ವೈತಾಧಿಕರಣ ರತ್ನ ಮಾಲ' ಎನ್ನುವ ಗ್ರಂಥವನ್ನು ಬರೆದಿದ್ದಾರೆ.

೩೬. ೧೯೮೫ ರಲ್ಲಿ ಅಂದಿನ ವೇದಾಂತ ದೇಶಿಕ ಮಹಾಯತೀಂದ್ರ ದೇಶಿಕರು ಶ್ರೀ ಭಾಷ್ಯಾನುಸಾರ 'ಬ್ರಹ್ಮಸೂತ್ರಾರ್ಥ ಪದ್ಯಮಾಲಿಕೆ' ಎನ್ನುವ ಗ್ರಂಥವೊಂದನ್ನು ರಚಿಸಿದರು.

೩೭. ಮೈಸೂರು ಪರಕಾಲ ಮಠದ ೩೩ನೇ ಜೀಯರ್ ರವರಾದ ಅಭಿನವ ರಂಗನಾಥ ಸ್ವಾಮಿಗಳು (೧೯೨೫-೧೯೬೬) 'ಗೂಢಾರ್ಥ ಸಂಗ್ರಹಃ' ಎನ್ನುವ ವಿಸ್ತಾರವಾದ ವ್ಯಾಖ್ಯಾನವನ್ನು ಬರೆದಿರುವರು. ಇದು ಪ್ರಕಟವಾಗಿದೆ.

೩೮. ವಾಧೂಲ ಶ್ರೀನಿವಾಸಚಾರ್ಯ ಎನ್ನುವವರು ಬರೆದಿರುವ 'ಶ್ರೀ ಭಾಷ್ಯ ಪ್ರಕಾಶಿಕ' ಎನ್ನುವ ವ್ಯಾಖ್ಯಾನವೂ ಕೂಡ ಪ್ರಕಟವಾಗಿದೆ.

೩೯. 'ಅಭಿನವ ದೇಶಿಕ' ಎಂದು ಬಿರುದಾಂಕಿತರಾದ ಉತ್ತಮೂರು ವೀರರಾಘವಾಚಾರ್ಯರು 'ಶ್ರೀ ಭಾಷ್ಯಾರ್ಥ ದರ್ಪಣ' ಎನ್ನುವ ವ್ಯಾಖ್ಯಾನವೊಂದನ್ನು ರಚಿಸಿದ್ದಾರೆ. ಇದು ಆಧುನಿಕವಾದ ಸಂಸ್ಕೃತ ವ್ಯಾಖ್ಯಾನವಾಗಿದ್ದು ಮೊದಲ ಸಂಪುಟವು ೧೯೬೩ ರಲ್ಲೂ, ೨ನೇ ಸಂಪುಟವು ೧೯೬೪ ರಲ್ಲೂ ಪ್ರಕಟವಾಗಿವೆ.

೪೦. ಕಾರುಕುಚ್ಚಿ ವೆಂಕಟ ರಾಘವಾಚಾರ್ಯರು 'ಶ್ರೀ ಭಾಷ್ಯಾರ್ಥ ಸಂಗ್ರಹಃ' ಎನ್ನುವ ಮಣಿಪ್ರವಾಳ ಗ್ರಂಥವನ್ನು ರಚಿಸಿದ್ದಾರೆ.

೪೧. ವರದರಾಜ ಸೂರಿ ಎನ್ನುವವರು 'ಶ್ರೀಭಾಷ್ಯ ಪ್ರಮೇಲ ಮಾಲಾ' ಎನ್ನುವ ಗ್ರಂಥವನ್ನು ಪ್ರಕಟಿಸಿದ್ದಾರೆ.

೪೨. ರಂಗರಾಜ ಮುನಿಗಳು 'ಶ್ರೀ ಶಾರೀರಕ ಶಾಸ್ತ್ರಾರ್ಥ ದೀಪಿಕ' ಎನ್ನುವ ವ್ಯಾಖ್ಯಾನವನ್ನು ರಚಿಸಿದ್ದಾರೆ.

೪೩. ವೇದಾಂತ ಯತಿರಾಜ ಎನ್ನುವವರು ಬರೆದಿರುವ 'ಬ್ರಹ್ಮಸೂತ್ರ ವೃತ್ತಿ' ಎನ್ನುವ ವ್ಯಾಖ್ಯಾನವೊಂದಿದೆ.

೪೪. ಶ್ರೀನಿವಾಸ ಎನ್ನುವವರು 'ಬ್ರಹ್ಮಸೂತ್ರಾರ್ಥ'; ಎನ್ನುವ ವಿಪುಲ, ವಿಚಾರಾತ್ಮಕ ಗ್ರಂಥವೊಂದನ್ನು ಬರೆದಿದ್ದಾರೆ.

೪೫. ರಾಮಾನುಜದಾಸರು 'ಶಾರೀರಿಕ ಭಾಸ್ಕರಂ' ಎನ್ನುವ ವ್ಯಾಖ್ಯಾನ ಗ್ರಂಥವೊಂದನ್ನು ರಚಿಸಿದ್ದಾರೆ.

೪೬. ಸುಂದರರಾಜ ವಿರಚಿತ 'ಶ್ರೀ ಭಾಷ್ಯ ವ್ಯಾಖ್ಯ' ಎನ್ನುವ ಗ್ರಂಥವೊಂದಿದೆ.

ಇವೇ ಅಲ್ಲದೆ ಇನ್ನೂ ಕೆಲವು ವ್ಯಾಖ್ಯಾನಗಳು ಇವೆ. ಮುಖ್ಯವಾದವುಗಳೆಂದರೆ -

೪೭. ಶ್ರೀನಿವಾಸ ವಿರಚಿತ 'ಶ್ರೀಭಾಷ್ಯ ಲಘು ಭಾವ ಪ್ರಕಾಶಿಕ'.

೪೮. ರಾಮಾನುಜ ಸೂರಿ ವಿರಚಿತ 'ಶ್ರೀಭಾಷ್ಯ ಸುದೋಧಿನಿ'.

೪೯. ವೆಂಕಟಾಚಾರ್ಯ ವಿರಚಿತ 'ಬ್ರಹ್ಮಸೂತ್ರ ಭಾಷ್ಯ ಪೂರ್ವಪಕ್ಷ ಸಂಗ್ರಹ ಕಾರಿಕಾ'.

೫೦. ಶಠಕೋಪಮುನಿ ವಿರಚಿತ 'ಬ್ರಹ್ಮಸೂತ್ರಾರ್ಥ ಸಂಗ್ರಹಃ'.



೫೧. ನಾರಾಯಣ ವಿರಚಿತ 'ಬ್ರಹ್ಮಸೂತ್ರ ವ್ಯಾಖ್ಯಾ'.

೫೨. ತಿರುಮಲೈ ಲಕ್ಷ್ಮೀಕುಮಾರ ಕೋಟಿಕನ್ಯಾ ಅನಂತ ಕೃಷ್ಣ ತಾತಾಚಾರ್ಯ ಮಹಾದೇಶಿಕ ವಿರಚಿತ 'ಬ್ರಹ್ಮಶಬ್ದಾರ್ಥ ವಿಚಾರಃ'.

೫೩. ಶಠಗೋಪಾಚಾರ್ಯ ವಿರಚಿತ 'ಬ್ರಹ್ಮ ಶಬ್ದಾರ್ಥವಿಚಾರ' ಹಾಗೂ 'ಬ್ರಹ್ಮ ಶಬ್ದಾರ್ಥ ನಿಷ್ಕರ್ಷಾ'.

೫೪. ದೇಶಿಕಾಚಾರ್ಯ ವಿರಚಿತ 'ಬ್ರಹ್ಮಸೂತ್ರ ಭಾಷ್ಯಟಿಪ್ಪಣಿ'.

೫೫. ಕಾರಿಕ್ಕುರಿಚ್ಚಿ ವೆಂಕಟಕೃಷ್ಣಮಾಚಾರ್ಯ ವಿರಚಿತ 'ಶ್ರೀಭಾಷ್ಯಾರ್ಥ ಮಣಿಪ್ರವಾಳ ದೀಪಿಕಾ'.

೫೬. ಸಿರಿಸಿನಗಳ್ ಕೃಷ್ಣಮಾಚಾರ್ಯ ವಿರಚಿತ 'ಶ್ರೀ ಭಾಷ್ಯೋಪನ್ಯಾಸಾಃ'.

೫೭. ಶ್ರೀರಂಗಾಚಾರ್ಯ ವಿರಚಿತ 'ಶ್ರೀಭಾಷ್ಯ ಸಿದ್ಧಾಂತಸಾರಾಃ'.

೫೮. ವರದಾಚಾರ್ಯ ಕೃತ 'ಶ್ರೀಭಾಷ್ಯವಾರ್ಥಿಕಮ್ ಶ್ರೀ ಭಾಷ್ಯಪ್ರಮೇಯ ಮಾಲಾ'.

ಎನ್ನುವವುಗಳು ಹೆಸರಿಸುವಂತಹವು.

ಇನ್ನು ಕೆಲವು ವ್ಯಾಖ್ಯಾನಗಳಿಗೆ ಲೇಖಕರ ಹೆಸರೇ ಇಲ್ಲ. ಇಂತಹ ಅನೇಕ ಗ್ರಂಥಗಳು ಅಡಯಾರು ಗ್ರಂಥಾಲಯದಲ್ಲಿವೆ. ಈ ಅಜ್ಞಾತ ಪಂಡಿತರಿಂದ ರಚಿತವಾದ ವ್ಯಾಖ್ಯಾನ ಗ್ರಂಥಗಳೆಂದರೆ -

೫೯. ಅಧಿಕರಣ ಸಂಗ್ರಹ ಶ್ಲೋಕ ವ್ಯಾಖ್ಯಾ

೬೦. ಜನ್ಮಾದ್ಯಧಿಕರಣ ವಿಚಾರಮ್.

೬೧. ಬ್ರಹ್ಮಸೂತ್ರ ದೂಷಣೋದ್ಧರಃ.

೬೨. ಬ್ರಹ್ಮಸೂತ್ರ ಭಾಷ್ಯ ಸಂಗ್ರಹ ವಿವರಣಮ್,

೬೩. ಬ್ರಹ್ಮಸೂತ್ರ ಭಾಷ್ಯಾರಂಭ ಪ್ರಯೋಜನ ಸಮರ್ಥನಮ್,

೬೪. ಬ್ರಹ್ಮಸೂತ್ರಾಧಿಕರಣ ಸೂತ್ರಕಾರಿಕಾ,

೬೫. ಬ್ರಹ್ಮಸೂತ್ರ ಭಾಷ್ಯ ಸಂಗ್ರಹ ಟಿಪ್ಪಣಿ,

೬೬. ಬ್ರಹ್ಮಸೂತ್ರ ವೃತ್ತಿಃ,

೬೭. ಶಾರೀರಕ ವ್ಯಾಖ್ಯಾನಮ್,

೬೮. ಶಾರೀರಿಕ ಸಾರಾರ್ಥ ಸಂಗ್ರಹಃ,

೬೯. ಲಘುಭಾವ ಪ್ರಕಾಶಿಕಾ,

೭೦. ಸುಬೋಧಿನೀ,

೭೧. ಶ್ರುತಪ್ರಕಾಶಿಕಾ ವ್ಯಾಖ್ಯಾ ತಾತ್ಪರ್ಯ ದೀಪಿಕಾ,

೭೨. ಶ್ರುತ ಪ್ರಕಾಶಿಕಾ ಸಂಗ್ರಹಃ,

೭೩. ಷಷ್ಠರ್ಥ ವಿಚಾರಃ,

೭೪. ಬ್ರಹ್ಮಸೂತ್ರ ಭಾಷ್ಯ ವ್ಯಾಖ್ಯಾ

೭೫. ಬ್ರಹ್ಮಸೂತ್ರ ಭಾಷ್ಯ ಸಂಗ್ರಹ ಟಿಪ್ಪಣಿ,

೭೬. ಬ್ರಹ್ಮಸೂತ್ರಾರ್ಥ ಸಂಗ್ರಹಮ್,

೭೭. ರಾಮಾನುಜ ಸಿದ್ಧಾಂತಮ್,

೭೮. ರಾಮಾನುಜ ಸಿದ್ಧಾಂತ ನಿರ್ಣಯ ಸಂಗ್ರಹಮ್,

೭೯. ಶ್ರೀ ಭಾಷ್ಯ ಪ್ರಕಾಶಿಕಾ - ಲಘುಭಾವ ಪ್ರಕಾಶಿಕಾ,

೮೦. ಶ್ರೀ ಭಾಷ್ಯ ವ್ಯಾಖ್ಯಾ ಸುಬೋಧಿನೀ,

ಇತ್ಯಾದಿಯವು.

## ಕನ್ನಡದಲ್ಲಿ ಶ್ರೀ ಭಾಷ್ಯ

ಕರ್ನಾಟಕದಲ್ಲಿನ ರಾಮಾನುಜಭಕ್ತರು ತುಂಬಾ ನಿಧಾನವಾಗಿ ಶ್ರೀಭಾಷ್ಯದ ಕಡೆ ಗಮನ ಹರಿಸಿದರು. ಇಂತಹ ಮೊಟ್ಟಮೊದಲ ಪ್ರಯತ್ನವನ್ನು ಕಲ್ಕಿ ನರಸಿಂಹಾಚಾರ್ಯ (ಕಲ್ಕಿ ಸಿಂಹ)ರು ಮಾಡಿದರು. ೧೯೩೧ ರಲ್ಲಿ 'ಶ್ರೀಭಾಷ್ಯಸಾರಾಮೃತ' ಎಂಬ ಗ್ರಂಥದಲ್ಲಿ ತಿಳಿಗನ್ನಡದಲ್ಲಿ ಸರ್ವರಿಗೂ ಅರ್ಥವಾಗುವಂತೆ ಶ್ರೀ ಭಾಷ್ಯವನ್ನು ವಿವರಿಸಿದ್ದಾರೆ. ಕ್ರೌನ್ ಅಷ್ಟದಳದ ೯೬ ಪುಟಗಳಲ್ಲಿ ವಿಸ್ತಾರವಾದ ವಿಷಯವನ್ನು ಸಂಗ್ರಹಿಸಿರುವುದು ಅವರ ಲೇಖನ ಕೌಶಲವನ್ನು ತೋರಿಸುತ್ತದೆ.

ಇಂತಹುದೇ ಪ್ರಯತ್ನಗಳು ಶ್ರೀ ಆಂಡವನ್ ಸ್ವಾಮಿ ಯವರ 'ಶ್ರೀಭಾಷ್ಯ - ರಹಸ್ಯತ್ರಯಸಾರ', ಎಂ. ಓ. ಎಸ್. ಅಯ್ಯಾಂಗಾರ್‌ರವರ 'ಶ್ರೀಭಾಷ್ಯ ತಾತ್ಪರ್ಯ ಸಾರ' ಶ್ರೀದೇವಿಯವರ 'ಶ್ರೀಭಾಷ್ಯ ಪ್ರವೇಶ' ಕೆ. ಎಸ್. ಕೃಷ್ಣತಾತಾಚಾರ್‌ರವರ 'ಶ್ರೀ ಭಾಷ್ಯಾಮೃತಸಾರ' ಗಳಲ್ಲಿ ನಡೆದಿವೆ.

ಆದರೆ ಮೂಲ ಬ್ರಹ್ಮಸೂತ್ರಗಳನ್ನು ನೀಡಿ, ಅವುಗಳಿಗೆ ಶ್ರೀಭಾಷ್ಯದ ಕನ್ನಡದ ಅರ್ಥ ನೀಡಿದ ಮೊಟ್ಟಮೊದಲ ಪ್ರಯತ್ನ ಶ್ರೀ ಟಿ.ವಿ. ನಾಥಮುನಿ ಅಯ್ಯಂಗಾರ್‌ರವರಿಂದ ಆಯಿತು. ಇವರು 'ಬ್ರಹ್ಮಸೂತ್ರಗಳು - ಶ್ರೀಭಾಷ್ಯದರ್ಪಣ' ಎನ್ನುವ ಕೃತಿ ಡೆಮ್ಮಿ ಅಷ್ಟದಳ ೫೦೦ ಪುಟಗಳ ವಿಸ್ತೃತ ಕೃತಿಯನ್ನು ೧೯೭೨ ರಲ್ಲಿ (ಬೆಲೆ ೧೨-೦೦ ರೂ.) ಪ್ರಕಟಿಸಿದರು. ರಾಮಾನುಜರ ಭಾಷ್ಯದೊಂದಿಗೆ ಶಂಕರ, ಮಾಧ್ವರ ಬ್ರಹ್ಮ ಸೂತ್ರ ಭಾಷ್ಯಗಳ ಕಿರುಪರಿಚಯವನ್ನೂ ಇದರಲ್ಲಿ ನೀಡಲಾಯಿತು.

ಇಂತಹುದೇ ಒಂದು ಬೃಹತ್ ಪ್ರಯತ್ನ ಇತ್ತೀಚೆಗೆ ನಾಥಮುನಿ ಅಯ್ಯಂಗಾರ್‌ರವರ ಸಹೋದರರ ಸಾಹಸದಿಂದ ಫಲಪ್ರದವಾಯಿತು. ಶ್ರೀವೈಷ್ಣವ ಸಾಹಿತ್ಯದ ಖ್ಯಾತ ವಿದ್ವಾಂಸರಾದ ಡಾ|| ಎಸ್. ಎಸ್. ಅನಂತರಂಗಾಚಾರ್‌ರವರು ಶ್ರೀ ಭಾಷ್ಯದ ಮೂಲ, ಅದರ ಕನ್ನಡ ಅನುವಾದ ಹಾಗೂ ಆವಶ್ಯಕ ಇತರೇ ವಿವರಗಳೊಡನೆ 'ಶ್ರೀಭಾಷ್ಯ'ವನ್ನು ಮೂರು ಸಂಪುಟಗಳಲ್ಲಿ ಪ್ರಕಟಿಸಿದರು. ಮೊದಲ ಸಂಪುಟವು ಶ್ರೀ ಭಾಷ್ಯದ ಮೊದಲ ಅಧ್ಯಾಯದ ಮೊದಲಪಾದವನ್ನು ಒಳಗೊಂಡು (ಡೆಮ್ಮಿ ಅಷ್ಟದಳ ೬೪೮+೨೮ ಪುಟಗಳು, ಬೆಲೆ ೬೦-೦೦) ೧೯೮೪ ರಲ್ಲಿ ಬೆಳಕು ಕಂಡಿತು. ಇದೇ ರೀತಿಯಲ್ಲಿ ಉಳಿದೆರಡು ಸಂಪುಟಗಳೂ ಪ್ರಕಟಗೊಂಡವು. ಎರಡನೇ ಸಂಪುಟವು (ಮೊದಲ ಅಧ್ಯಾಯದ ಎರಡನೇ ಪಾದದಿಂದ ಎರಡನೇ ಅಧ್ಯಾಯದ ಎರಡನೇಪಾದ ಪೂರ್ತಿ ಒಳಗೊಂಡು ಡೆಮ್ಮಿ ಅಷ್ಟದಳ ೭೦೪ + ೮ ಪುಟಗಳು, ಬೆಲೆ ೬೦ ರೂ.) ೧೯೮೭ ರಲ್ಲೂ, ಮೂರನೇ ಸಂಪುಟವು (ಎರಡನೇ ಅಧ್ಯಾಯದ ಮೂರನೇ ಪಾದದಿಂದ ನಾಲ್ಕನೇ ಅಧ್ಯಾಯ ಪೂರ್ತಿ, ಡೆಮ್ಮಿ ಅಷ್ಟದಳ ೭೬೮ + ೧೬ ಪುಟ, ಬೆಲೆ ೬೦ ರೂ.) ೧೯೯೦ ರಲ್ಲಿ ಪ್ರಕಟವಾದುವು. ಸುಮಾರು ಎರಡು ಸಾವಿರ ಪುಟಗಳನ್ನು ಮೀರಿರುವ ಈ ಕೃತಿಯು ಕೇವಲ ಸೇವಾ ಮನೋಭಾವದಿಂದ ಹೊರಬಂದಿದೆ ಎಂದರೆ ಅತಿಶಯೋಕ್ತಿಯಲ್ಲ. ಇದು ಕನ್ನಡದ ಧಾರ್ಮಿಕ ಸಾಹಿತ್ಯದ ಒಂದು ಅಮೂಲ್ಯರತ್ನ.

## ವಿದೇಶೀ ಭಾಷೆಗಳಲ್ಲಿ 'ಶ್ರೀಭಾಷ್ಯ'

ಭಗವದ್ಗೀತೆಯಂತೆ ರಾಮಾನುಜರ ಶ್ರೀಭಾಷ್ಯವೂ ಅಮೆರಿಕನ್ನರು ಹಾಗೂ ಐರೋಪ್ಯರನ್ನು ಆಕರ್ಷಿಸಿದೆ. ಮೈಸೂರಿನ ಪ್ರೊ. ಎಂ. ಯಾಮುನಾಚಾರ್ಯ, ಹಾಗೂ ಪ್ರೊ. ಎಸ್. ಎಸ್. ರಾಘವಾಚಾರ್ ಹಾಗೂ ಮದ್ರಾಸ್‌ನ ಪ್ರೊ. ಎಂ. ರಂಗಾಚಾರ್ಯ - ಇವರುಗಳ ಪ್ರಭಾವದಿಂದ ವಿದೇಶೀಯರು ಆಕರ್ಷಿತರಾಗಿ ಭಾರತಕ್ಕೆ ಬಂದು ಇವರುಗಳ ಬಳಿ ವಿಶಿಷ್ಟಾದ್ವೈತವನ್ನು ಅಧ್ಯಯನ ಮಾಡಿ, ಸಂಶೋಧನಾತ್ಮಕ ಪ್ರಬಂಧಗಳು ಹಾಗೂ ಡಾಕ್ಟರೇಟ್ ಪ್ರಬಂಧಗಳನ್ನು ಸಿದ್ಧಗೊಳಿಸಿದ್ದಾರೆ. ಅಲ್ಲಿನ ಬುದ್ಧಿ ಜೀವಿ ಜನಾಂಗದವರನ್ನು ಆಕರ್ಷಿಸಿರುವ ರಾಮಾನುಜ ಸಿದ್ಧಾಂತವು ಅವರ ಪ್ರೀತಿಯ ವಿಷಯವಾಗಿದೆ. ಪರಿಣಾಮವಾಗಿ ಶ್ರೀಭಾಷ್ಯವು ಅಲ್ಲಿನ ಅನೇಕ ಭಾಷೆಗಳಿಗೆ ಅನುವಾದವಾಗಿದೆ.

1. The Vedanthasutras with the commentary by Ramanuja - George Thibaut - Sacred books of the East - Vol. 48 Oxford - 1904.
2. Sri Bhashya of Ramanuja - R.D. Karmarkar . 1962. 3 Volumes.
3. Sri Bhashya - (English Translation) - V.K. Ramanujachar.
4. The Mahasiddhanta of Ramanujas SriBhashya - James Norton.
5. The Vedanta Sutras with the SriBhashya of Ramanuja - Vol.I (2nd Edition) 1961, Vol.II 1964, Vol.III 1965 by M. Rangacharya and M.B. Varadarajaiyengar.
6. A Critical study of the Philosophy of Ramanuja - Sen Gupta, Anima, Chowkamba series, Benares (Vol.55) - 1967.
7. The Vedanta - A study of the Brahma sutras with the Bhashyams of Sankara, Ramanuja etc., V.S. Ghate.
8. Siddhanta des Ramanuja - Rudolf, Otto (ಶ್ರೀ ಭಾಷ್ಯದ ಜರ್ಮನ್ ಅನುವಾದ ) 1917.
9. La doctrine morale et meta phisique de Ramanuja (ಶ್ರೀ ಭಾಷ್ಯದ ಫ್ರೆಂಚ್ ಅನುವಾದ) 1938 by Lacombe, Oliver. ಇತ್ಯಾದಿಯವು.

ಈ ರೀತಿಯಲ್ಲಿ ಒಂದು ಪ್ರವಾಹ ರೂಪದಂತೆ ಸಾಲಾಗಿ ರಾಮಾನುಜರ ಶ್ರೀಭಾಷ್ಯದ ಬಗ್ಗೆ ಬಂದಿರುವ ಕೃತಿಗಳು ಅವರ ಅಸದೃಶವೂ, ಅಖಂಡವೂ ಆದ ಪ್ರಭಾವವನ್ನು ಸ್ಪಷ್ಟಪಡಿಸುತ್ತವೆ.

ಶ್ರೀಭಾಷ್ಯಕಾರೋ ಜಯತು
ರಾಮಾನುಜ ಜಗದ್ಗುರುಃ
ಮುಮುಕ್ಷೂಣಾಂ ಚ ಸರ್ವೇಷಾಂ
ಶ್ರೀಮದಷ್ಟಾಕ್ಷರ ಪ್ರದಃ

*

# ಭಜನ ಪದ್ಧತಿ ಹಾಗೂ ತ್ಯಾಗರಾಜರು

---ಡಾ|| ವಿ. ಎಸ್. ಸಂಪತ್ಕುಮಾರಾಚಾರ್ಯ.

ರಾಮೇಧರ್ಮಂ ಜನೇಷ್ವರ್ಥಂ
ಕಾಮಂ ಚ ಶ್ರೀಪತಿ ಸ್ತುತೌ
ಯಸ್ಸಕ್ತ್ವಾ ಮುಕ್ತ ಆಭಾತಿ
ತ್ಯಾಗರಾಜಂ ತಮಾಶ್ರಯೇ
- ಹರಿಕೇಶನಲ್ಲೂರ್ ಮುತ್ತಯ್ಯಭಾಗವತರು

ಪ್ರಸ್ತಾವನೆ : ಭಕ್ತಿಯು ಬಹಳ ಪ್ರಾಚೀನವಾದುದು ಅದರ ಮೂಲವನ್ನು ಋಗ್ವೇದದಲ್ಲಿ ನೋಡಬಹುದು. ಜಗತ್ಕರ್ತೃವೂ, ನಿತ್ಯನೂತನನೂ, ಶ್ರೀಪತಿಯೂ ಆದ ವಿಷ್ಣುವಿಗೆ ತನ್ನನ್ನು ಯಾರು ಸಮರ್ಪಿಸಿಕೊಳ್ಳುತ್ತಾನೆಯೋ, ಅವನ ಶ್ರೇಷ್ಠವಾದ ಜನ್ಮಕರ್ಮಾದಿಗಳನ್ನು ಸ್ತುತಿಸುತ್ತಾನೆಯೋ, ಅವನು ಚಿತ್ಸ್ವರೂಪನಾದ ವಿಷ್ಣುವನ್ನು ಹೊಂದುತ್ತಾನೆ" (ಋಕ್ಸಂಹಿತಾ) ಆದಿ ಶಂಕರಾಚಾರ್ಯರು ತಮ್ಮ ಬ್ರಹ್ಮಸೂತ್ರ ಭಾಷ್ಯದಲ್ಲಿ ಹೀಗೆ ಹೇಳಿದ್ದಾರೆ --

ತತ್ರ ಭಾಗವತಾ ಮನ್ಯಂತೇ
ಭಗವಾನ್ಯೇಕೋ ವಾಸುದೇವೋ
ನಿರಂಜನ ಜ್ಞಾನ ಸ್ವರೂಪಃ
ಪರಮಾತ್ಮತತ್ವಮ್

ಅಂದರೆ ನಿರಂಜನ ಜ್ಞಾನ ಸ್ವರೂಪನಾದ ವಾಸುದೇವ ಭಗವಂತನೊಬ್ಬನೇ. ಪರಮಾತ್ಮನನ್ನು ಭಜಿಸುವವನ ಮತವೇ ಭಾಗವತ ಧರ್ಮ.

ಈ ಧರ್ಮವು ಬಹಳ ಹಿಂದಿನದು. ಬಾದರಾಯಣರಿಗಿಂತ ಹಿಂದೆಯೇ ಭಾಗವತ ಪಂಥ ವಿದ್ದಿತು. ಭಗವಾನ್ ಎಂದರೆ ಪೂರ್ಣಾರ್ಥದಲ್ಲಿ ಪರಮಾತ್ಮನೊಬ್ಬನೇ. ಈ ಹೆಸರಿಗೆ ಯೋಗ್ಯನಾದ, ಷಡ್ಗುಣೈಶ್ವರ್ಯ ಸಂಪನ್ನನಾದ ಶ್ರೀ ಮಹಾವಿಷ್ಣುವೇ ಈ ಧರ್ಮದಲ್ಲಿ ಆರಾಧ್ಯದೈವ. ಶ್ರೀಮನ್ನಾರಾಯಣನು ಈ ಮತದಲ್ಲಿ ಪ್ರಧಾನದೇವತೆಯಾದುದರಿಂದ ನಾರಾಯಣೀ ಧರ್ಮವೆಂಲೂ, ಶ್ರೀಕೃಷ್ಣನೇ ಮುಂತಾದವರು ಹುಟ್ಟಿದ ಸತ್ವತದಲ್ಲಿ ಪ್ರಚಲಿವಾಗಿದ್ದುದರಿಂದ ಸಾತ್ವತ ಮತವೆಂತಲೂ, ಏಕಾಂತಭಕ್ತಿಯನ್ನು ಪ್ರತಿಪಾದಿಸುವುದರಿಂದ ಏಕಾಂತಿಕ ಮತವೆಂತಲೂ, ಪಂಚರಾತ್ರ ಆಗಮದಲ್ಲಿ, ವಿಸ್ತಾರವಾಗಿ ಪ್ರಧಾನವಾಗಿ ಚರ್ಚಿಸಿರುವುದರಿಂದ ಪಾಂಚರಾತ್ರ ಮತವೆಂತಲೂ ಇದನ್ನು ಕರೆಯುವುದುಂಟು. ವೈಷ್ಣವಮತ, ವೈಷ್ಣವ ಧರ್ಮಎಂಬ ಹೆಸರುಗಳೂ ಪ್ರಚಾರದಲ್ಲಿವೆ.



ಮಹಾಭಾರತದ ಶಾಂತಿಪರ್ವದ ನಾರಾಯಣೀಯ ವಿಷ್ಣುಪುರಾಣ, ಭಗವದ್ಗೀತಾ, ಭಾಗವತ, ಪಾಂಚರಾತ್ರಾಗಮ ಭಕ್ತಿಸೂತ್ರಗಳು - ಇವು ಭಾಗವತ ಧರ್ಮದ ಆಕರಗ್ರಂಥಗಳು.

## ಭಾಗವತ ಧರ್ಮ :

ಈ ಧರ್ಮದಲ್ಲಿ ಪರಬ್ರಹ್ಮನು ಸಾಕಾರ, ಸಗುಣ ಮತ್ತು ವ್ಯಕ್ತಪುರುಷ. ಈಶ್ವರ, ನಾರಾಯಣ, ಮಹಾವಿಷ್ಣು, ಕೃಷ್ಣವಾಸುದೇವ -ಇವೇ ಮೊದಲಾದುವು ಅವನ ಹೆಸರುಗಳು. ಅವನನ್ನು ಅರಿಯಲು ಅವನ ಅನುಗ್ರಹವನ್ನು ಸಂಪಾದಿಸಿದ ಹೊರತು ಬೇರೆ ಮಾರ್ಗವಿಲ್ಲ. ಭಕ್ತಿ, ಪ್ರಪತ್ತಿ, ಶರಣಾಗತಿ ಇದರಿಂದ ಅವನ ಅನುಗ್ರಹವನ್ನು ಪಡೆಯಬಹುದು. ಅವನು ಸರ್ವತಂತ್ರನೆಂಬ ಹೆಸರು ಪಡೆದಿದ್ದರೂ ಭಕ್ತ ಪರಾಧೀನ. ಆದ್ದರಿಂದಲೇ ಏಕಾಂತಭಕ್ತಿಯ ಶರಣಾಗತಿಯ ಮೂಲಕ ಅವನನ್ನು ಸುಲಭವಾಗಿ ಒಲಿಸಬಹುದು. ಇದು ಭಾಗವತ ಧರ್ಮದ ಸಾರ.

ಗುರುವಿನಿಂದ ವೈಷ್ಣವ ಮಂತ್ರದ ಉಪದೇಶ ಪಡೆದು ನಿರಂತರವಾಗಿ ಅದನ್ನು ಜಪಿಸುತ್ತಾ, ಸ್ವಕುಲಾಚಾರದಂತೆ ವ್ರತಗಳನ್ನು ಮಾಡುತ್ತಾ, ಯಾವ ಸಿದ್ಧಾಂತದ ಅನುಯಾಯಿ ಆಗಿದ್ದರೂ, ಭಗವಂತನ ಅರ್ಚನೆ, ವೈಷ್ಣವ ಪುರಾಣಗಳ ಶ್ರವಣ, ಪಾರಾಯಣ, ಭಜನೆ, ಕ್ಷೇತ್ರಾದಿಗಳ ದರ್ಶನ, ತೀರ್ಥಸ್ನಾನ ಶಿವ ವಿಷ್ಣು ಭೇದವಿಲ್ಲದೆ 'ಸರ್ವಂ ವಿಷ್ಣುಮಯ ಜಗತ್' ಎಂಬ ಕಲ್ಯಾಣ ಸಿದ್ಧಾಂತವನ್ನು ಸ್ಮರಿಸುತ್ತಿ ಬೇಕು. ಇದು ಭಾಗವತ ಸಂಪ್ರದಾಯ.

## ಭಕ್ತಿ :

ಇದರಲ್ಲಿ ಅತಿಮುಖ್ಯವಾದುದು ಭಕ್ತಿ. 'ಸ ತ್ವಸ್ಮಿನ್ ಪರಮಪ್ರೇಮ ರೂಪಾ' ಅದು ಭಕ್ತನಿಗ ಭಗವಂತನಿಗೂ ಇರುವ ಸಂಬಂಧ. ಅದು ಪ ಮಪ್ರೇಮರೂಪವಾದುದು. 'ಸಾ ಪರಾಭಕ್ತಿರಿ ಶ್ವರೇ' (ಶಾಂಡಿಲ್ಯ) ಅದು ಭಗವಂತನಲ್ಲಿ ಅನುರಾ ಉಳ್ಳದ್ದು. ಪ್ರೇಮಕ್ಕು ಪರಮ ಪ್ರೇಮಕ್ಕೂ ವ್ಯತ್ಯಾ ವುಂಟು. ಪ್ರೇಮ ಎನ್ನುವುದು ಸಾಮಾನ್ಯ ಬಳಕೆಯ ಎಲ್ಲರ ಅನುಭವದಲ್ಲಿ ಇರುವಂಥಹುದು. ಪ್ರಾಪಂಚಿಕ ಪ್ರೀತಿಯಲ್ಲಿ ನಾವೆಷ್ಟು ಪ್ರಮಾಣದ ಇತರರನ್ನು ಪ್ರೀತಿಸುತ್ತೇವೋ ಅದೇ ಪ್ರಮಾಣದ ನಮ್ಮನ್ನು ಪ್ರೀತಿಸಬೇಕೆಂದು ಆಶಿಸುತ್ತೇವೆ., ಅ ವಸ್ತುವಾದರೆ ಐಶ್ವರ್ಯವೋ ಲಾಭವೋ ಅಥವ ಬೇರೆ ಯಾವುದಾದರೂ ಪ್ರಯೋಜನವೋ ಆ ಬಹುದು. ಆದರೆ ಪರಮಪ್ರೀತಿಯಲ್ಲಿ ಪ್ರೀತಿಗಾ ಭಕ್ತನು ಭಗವಂತನನ್ನು ಪ್ರೀತಿಸುತ್ತಾನೆ. ಅವನಿ ಮತ್ತಾವುದೂ ಬೇಕಿಲ್ಲ. ಇದರಲ್ಲಿ ವ್ಯಾಪಾರದ ದೃ ಯಿಲ್ಲ. ಭಗವಂತನು ಕೊಡುವುದು ಬಿಡುವುದನ್ ಗಮನಿಸುವುದಿಲ್ಲ. ಈ ಪ್ರೀತಿಯಲ್ಲಿ ಅಂಜಿಕೆ ಇ ಇದರಲ್ಲಿ ಭಗವಂತನು ಭಕ್ತನ ಅತಿ ನಿಕಟ ಬಂಧ ಈ ಪ್ರೀತಿಯಲ್ಲಿ ಅಸೂಯೆ ಇಲ್ಲ. ಒಬ್ಬ ಭಕ್ತ ಬೇರೊಬ್ಬ ಭಕ್ತನನ್ನು ಕಂಡಾಗ ಸಂತೋಷ ಪ ವನು. "ಅಮೃತ ಸ್ವರೂಪಾ ಚ" ಭಗವಂತ ಮೇಲಿನ ಭಕ್ತಿ ಎನ್ನುವುದು ಅಮೃತಕ್ಕೆ ಸಮಾನ.

ಭಗವಂತನ ನಾಮವನ್ನು ಉಚ್ಚರಿಸುವು ಕೇಳುವುದು, ಧ್ಯಾನಿಸುವುದು ಭಕ್ತನಿಗೆ ಅಮೃತಪಾ ಮಾಡಿದಂತೆ ತುಂಬ ರುಚಿಕರ. ಈ ರುಚಿಯ ಸವಿದಮೇಲೆ ಪ್ರಪಂಚದ ಭೋಗಗಳೆಲ್ಲ ಸಪ್ಪೆಯ ಗುವುವು. "ಯಲ್ಲಬ್ಧ್ವಾ ಪುಮಾನ್ ಸಿದ್ಧೋ ಭವ ಅಮೃತೋ ಭವತಿ, ತೃಪ್ತೋ ಭವತಿ" ಇದನ್ನು ಪ ದಮೇಲೆ ಭಕ್ತನು ಮುಕ್ತನಾಗುವನು. ಅವ ಮುಕ್ತಿಯನ್ನು ಆಶಿಸುವುದಿಲ್ಲ. ಅವನ ಏಕಮಾ ಗುರಿ ಭಗವಂತನನ್ನು ಅನುಗಾಲ ಪ್ರೀತಿಸುವು

ಯಾವ ಜನ್ಮವಾದರೂ ಬರಲಿ, ಯಾವ ಸ್ಥಿತಿಯ ಲ್ಲಿದ್ದರೂ ಭಗವತ್ಪ್ರೇಮ ಒಂದಿದ್ದರೆ ಸಾಕು ಎನ್ನುವುದು. 'ಜನ್ಮ ಜನ್ಮಾಂತರೇ ಪಿ ತ್ವತ್ಪಾದಾಂಭೋರುಹ ಯುಗಗತಾ ನಿಶ್ಚಲಾ ಭಕ್ತಿರಸ್ತು' ಎಂಬಂತೆ. ಈ ಭಕ್ತಿಯನ್ನು ಪಡೆದ ಭಕ್ತನು ಸಿದ್ಧನಾಗುತ್ತಾನೆ. ಅಂದರೆ ಪೂರ್ಣತೆಯನ್ನು ಪಡೆಯುತ್ತಾನೆ. ಅದನ್ನು ದೇವರ ಅನುಗ್ರಹದಿಂದ ಪಡೆಯುತ್ತಾನೆ. ಎಂದೆಂದಿಗೂ ಮುಕ್ತನಾಗಿ ಉಳಿಯುತ್ತಾನೆ. ತೃಪ್ತನಾಗುತ್ತಾನೆ. ಅವನಿಗೆ ಇಹಪರದಲ್ಲಿ ದೇವರಲ್ಲದೆ ಮತ್ತಾವುದೂ ದೇಕಿಲ್ಲ. 'ಯತ್ಪ್ರಾಪ್ಯ ನ ಕಿಂಚದ್ವಾಂಛತಿ, ನ ಶೋಚತಿ, ನ ದ್ವೇಷ್ಟಿ, ನ ರಮತೇ, ನ ಉತ್ಸಾಹೀ ಭವತಿ'. ಇಂತಹ ಪರಮಪ್ರೇಮವನ್ನು ಪಡೆದ ಮೇಲೆ ಮತ್ತಾವುದನ್ನೂ ಅದನ್ನು ಇಚ್ಛಿಸುವುದಿಲ್ಲ, ಶೋಕಪಡುವುದಿಲ್ಲ, ಯಾರನ್ನೂ ದ್ವೇಷಿಸುವುದಿಲ್ಲ, ಯಾವುದರಲ್ಲಿಯೂ ರಮಿಸುವುದಿಲ್ಲ. ಪ್ರಾಪಂಚಿಕ ವಸ್ತುಗಳಲ್ಲಿ ಉತ್ಸಾಹಿ ಯಾಗುವುದಿಲ್ಲ.

ಈ ಪರಭಕ್ತಿಯನ್ನು ಹೇಗೆ ಸಾಧಿಸುವುದು ? 'ಅವ್ಯಾವೃತ್ತ ಭಜನಾತ್' ನಿರಂತರ ಭಜನೆಯಿಂದ ಲಭಿಸುವುದು. ಭಜನೆ ಎಂದರೆ ತಾಳಮೇಳ ಗಳೊಡನೆ ಹಾಡುವುದು ಮಾತ್ರವಲ್ಲ. ಭಗವಂತನ ನಾಮೋಚ್ಚಾರಣೆ, ಪೂಜೆ, ಜಪ, ಸ್ಮರಣೆ, ಮನನ ಮುಂತಾದುವೆಲ್ಲವೂ ಸೇರಿವೆ.

"ಲೋಕೇಪಿ ಭಗವದ್ಗುಣ ಕೀರ್ತನಾತ್" ಪ್ರಪಂಚದ ಕೆಲಸದಲ್ಲಿ ನಿರತನಾಗಿರುವಾಗಲೂ ಭಗವಂತನ ಗುಣಗಳನ್ನು ಕೇಳುತ್ತಾ, ಕೀರ್ತನೆಮಾಡುತ್ತಾ ಇರಬೇಕು. 'ಸರ್ವದಾ ಸರ್ವಭಾವೇನ ನಿಶ್ಚಿತತ್ಮೈಃ ಭಗವಾನೇವ ಭಜನೀಯಃ' ಈ ಭಗವತ್ ಚಿಂತನೆ ಎಂಬುದು ಒಂದು ಚಿಂತನಾ ಝರಿ. ಸದಾ ಭಗವಂತನೆಡೆಗೆ ಹರಿಯುತ್ತಿರುವುದು. ಇಂತಹ ಜ್ಞಾನವೇ ಭಕ್ತಿ. 'ಭಕ್ತಿಃ ಜ್ಞಾನ ವಿಶೇಷಃ' ಅದೊಂದು ವಿಶಿಷ್ಟವಾದ ಜ್ಞಾನ.

## ಭಜನಪದ್ಧತಿ :

ಭಜನೆಯನ್ನು ಹಲವು ವಿಧದಲ್ಲಿ ಮಾಡುವ ರೂಢಿಯಿದೆ. ಭಜನೆಗಳಿಗಾಗಿ ಮೀಸಲಾಗಿರುವ ಮಂದಿರಗಳು ಸಾಮಾನ್ಯವಾಗಿ ಶ್ರೀರಾಮ ಮಂದಿರ, ಆಂಜನೇಯನಗುಡಿ, ಗಣೇಶ ಮಂದಿರಗಳಾಗಿರಬಹುದು. ಭಜನೆಗೆ ಯೋಗ್ಯವಾದ ಹಲವಾರು ದೇವ, ದೇವಿಯರ ಸ್ತೋತ್ರಗಳನ್ನೊಳಗೊಂಡ ಭಜನಾವಳಿ ಪುಸ್ತಕಗಳಿವೆ. ಭಗವಂತನ ದಿವ್ಯ ನಾಮಗಳನ್ನೂ, ಕೀರ್ತನೆಗಳನ್ನೂ, ಹಲವು ವಿಧವಾದ ಭಕ್ತಿಗೀತೆಗಳನ್ನು ಹಾಡುವುದು ಭಜನೆ. ಹಾಡುವುದು ಅಥವಾ ವಾದ್ಯಗಳನ್ನು ನುಡಿಸುವುದು ಅಥವಾ ಭಕ್ತಿಯಿಂದ ಕೇಳುವುದರ ಮೂಲಕ ಭಜನ ಗೋಷ್ಠಿಯಲ್ಲಿ ಭಾಗವಹಿಸುವವರು ಪಾಲುಗೊಳ್ಳುತ್ತಾರೆ. ಭಜನಗೋಷ್ಠಿಯಲ್ಲಿ ಮುಖ್ಯವಾಗಿರುವವರು (೧) ಭಾಗವತರು ಅಥವಾ ಮುಖ್ಯಸ್ಥ, (೨) ಭಾಗವತರ ಸಂಗಡ ಹಾಡುವವರು, (೩) ವಾದ್ಯಗಳನ್ನು ನುಡಿಸುವವರು, (೪) ಭಕ್ತಿಯಿಂದ ಕೇಳುವವರು. ನಾಮಾವಳಿಯನ್ನು ಹಾಡುವಾಗ ಇವರೂ ಭಾಗವಹಿಸುತ್ತಾರೆ. ಭಾಗವತರು ಕೊನೆಯಲ್ಲಿ ಹೇಳುವ ಪುಂಡರೀಕವನ್ನು ಎಲ್ಲರೂ ಒಟ್ಟಿಗೆ ಹೇಳುವುದು ಮನ ಮುಟ್ಟುವಂತಿರುತ್ತದೆ.

ಭಜನಗೋಷ್ಠಿಯಲ್ಲಿ ಶ್ರುತಿಗಾಗಿ ತಂಬೂರಿ, ಶ್ರುತಿಪೆಟ್ಟಿಗೆ ಅಥವಾ ಹಾರ್ಮೋನಿಯಂವಾದ್ಯವನ್ನು ಬಳಸುವುದುಂಟು. ಒಬ್ಬನು ಮೃದಂಗ ಅಥವಾ ತಬಲಾ ನುಡಿಸುತ್ತಾನೆ. ಖಂಜರ ಮತ್ತು ಜಾಲಾನವನ್ನು ನುಡಿಸುವುದುಂಟು. ಹಲವು ತಾಳವಾದ್ಯಗಳಿದ್ದರೆ ಭಜನೆಯು ಆಕರ್ಷಕ ವಾಗಿರುತ್ತದೆ. ಪಂಡರಪುರದ ಭಜನೆಗಳಲ್ಲಿ ಜಾಲಾನವನ್ನು ಕೇಳಲು ಹಿತಕರವಾಗಿರುವುದು ಎಲ್ಲರಿಗೂ ತಿಳಿದ ವಿಷಯ. ಕೆಲವು ಗೋಷ್ಠಿಗಳಲ್ಲಿ ಪಿಟೀಲು ನುಡಿಸುವುದುಂಟು. ಗ್ರಾಮಗಳಲ್ಲಿ ಅಲ್ಲಿಯ ಭಜನಗೋಷ್ಠಿಯಿಂದ ಗ್ರಾಮಸ್ಥರಿಗೆ ಸಂಗೀತದ ಪರಿಚಯವುಂಟಾಗಲು ಅವಕಾಶವಾಗುತ್ತದೆ. ಕೆಲವು ಭಕ್ತರು ಶುಕ್ರವಾರ, ಶನಿವಾರ, ಗುರುವಾರ, ಏಕಾದಶಿಗಳಂದು ತಪ್ಪದೆ ತಮ್ಮ ಮನೆಗಳಲ್ಲಿ ಭಜನೆ ಮಾಡುತ್ತಾರೆ. ಕೃತ್ತಿಕೆ, ರೋಹಿಣಿ ನಕ್ಷತ್ರಗಳಿರುವ ದಿನಗಳು, ಅಮಾವಾಸ್ಯೆ ಮತ್ತು ಪೂರ್ಣಿಮೆಯದಿನಗಳಲ್ಲೂ ಭಜನೆ ಮಾಡುತ್ತಾರೆ. ದೇವಾಲಯಗಳಲ್ಲಿ ಮಠಗಳಲ್ಲಿ ಮತ್ತೂ ಗೊತ್ತಾದ ಮಂದಿರಗಳಲ್ಲಿ ಭಜನೆಗಳು ನಡೆಯುತ್ತವೆ. ಭಾಗವತರು ಭಜನಗೋಷ್ಠಿಯ ನಾಯಕರು ಮತ್ತು ಭಜನ ಪದ್ಧತಿಯಲ್ಲಿ ಶಿಕ್ಷಣಪಡೆದವರು. ಇಂಥವರು ತಮ್ಮ ಬಲಗೈಗೆ ಕಂಕಣವನ್ನು ಕಟ್ಟಿಕೊಳ್ಳುತ್ತಾರೆ.

ಗೊತ್ತಾದ ಮಂದಿರಗಳಲ್ಲಿ ಅಥವಾ ಗೊತ್ತಾದ ಪವಿತ್ರ ದಿನಗಳಂದು ನಡೆಯುವ ಭಜನೆಗಳು ಒಂದು ವಿಧ. ಇಲ್ಲಿ ಎಲ್ಲರೂ ಕುಳಿತು ಭಜನೆ ಮ್ಮಾಡುತ್ತಾರೆ. ಮಂದಿರದ ಮಧ್ಯೆ ಇಟ್ಟಿರುವ ದೀಪದಸುತ್ತಲೂ ಕೆಲವು ಗೊತ್ತಾದ ಭಕ್ತರು ಪ್ರದಕ್ಷಿಣೆ ಮಾಡುತ್ತಾರೆ. ಡಿಸೆಂಬರ್ - ಜನವರಿ ತಿಂಗಳು ಅಂದರೆ ಮಾರ್ಗಶಿರ ಮಾಸದಲ್ಲಿ ದೇವಾಲಯಗಳ ಉತ್ಸವ ಮೂರ್ತಿಯೊಡನೆ ಹೋಗುವ ವೇದಪಾರಾಯಣ ಗೋಷ್ಠಿಯ ಹಿಂದೆ ಭಜನ ಗೋಷ್ಠಿಯು ಹೋಗುತ್ತದೆ. ಇದು ಉತ್ಸವದ ಆರಂಭದಿಂದ ದೇವಾಲಯಕ್ಕೆ ಹಿಂತಿರುಗುವವರೆಗೆ ಭಜನೆ ಮಾಡುತ್ತದೆ.

ಉಂಛವೃತ್ತಿ ಭಜನಗೋಷ್ಠಿಯು ಒಂದು ಚಲಿಸುವ ಗೋಷ್ಠಿ. ಇದರ ನಾಯಕನಾದ ಭಾಗವತರು ಉಂಛವೃತ್ತಿಯ ಉಡುಪನ್ನು ಧರಿಸಿರುತ್ತಾರೆ. ಈ ಗೋಷ್ಠಿಯು ಊರಿನ ಕೆಲವು ಬೀದಿಗಳಲ್ಲಿ ಭಜನೆ ಮಾಡುತ್ತಾ ಹೋಗುತ್ತದೆ. ಬೀದಿಯ ಎರಡು ಕಡೆ ಗೃಹಸ್ಥರು ಮತ್ತು ಗೃಹಿಣಿಯರು ಗೌರವದಿಂದ ಭಾಗವತರಿಗೆ ಅಕ್ಕಿ, ದೇಳೆಗಳನ್ನು ನೀಡುತ್ತಾರೆ. ಸ್ವಂತ ಇಚ್ಛೆಯಿಂದ ಬಡತನವನ್ನು ಅವಲಂಬಿಸಿ ತಮ್ಮ ಜೀವಮಾನವನ್ನು ನಡೆಸಲು ಸಂಕಲ್ಪ ಮಾಡಿರುವ ಭಾಗವತರು ತಮಗೆ ನೀಡಿದ ದವಸಧಾನ್ಯಗಳನ್ನು ತಮ್ಮ ಕುಟುಂಬ ಮತ್ತು ಶಿಷ್ಯರನ್ನು ಪೋಷಿಸಲು ವಿನಿಯೋಗಿಸುತ್ತಾರೆ. ಬೆಳಗಿನ ವೇಳೆಯಲ್ಲಿ ಉಂಛವೃತ್ತಿ ಮಾಡಿ ಬಂದು ಸಂಜೆಯ ವೇಳೆಯಲ್ಲಿ ಪಾಠಪ್ರವಚನಗಳಲ್ಲಿ ವಿನಿಯೋಗಿಸುವರು. ಪ್ರಸಿದ್ಧವಾಗ್ಗೇಯಕಾರ, ಭಕ್ತರಾಗಿದ್ದ ಸದ್ಗುರು ತ್ಯಾಗರಾಜರು ಅತಿಶ್ರೇಷ್ಠ ಉಂಛವೃತ್ತಿ ಭಾಗವತರಾಗಿದ್ದರು. ತಂಜಾವೂರು ಜಿಲ್ಲೆಯ ತಿರುವೈಯ್ಯಾರಿನ ಸಪ್ತಸ್ಥಾನ ಉತ್ಸವವು ಬಹಳ ಪ್ರಸಿದ್ಧವಾದುದು. ಈ ಉತ್ಸವದಲ್ಲಿ ಅನೇಕ ಭಜನ ಗೋಷ್ಠಿಗಳು ಭಾಗವಹಿಸುತ್ತವೆ. ಇದರಲ್ಲಿ ಸುಮಾರು ನೂರು ಭಜನಗೋಷ್ಠಿಗಳು ಭಾಗವಹಿಸುತ್ತಿದ್ದುವು. ಸದ್ಗುರು ತ್ಯಾಗರಾಜರು ತಮ್ಮ ಜೀವಿತ ಕಾಲದಲ್ಲಿ ಭಜನಗೋಷ್ಠಿ ಸಹಿತ ಈ ಉತ್ಸವದಲ್ಲಿ ಭಾಗವಹಿಸಿ ಆಯಾ ವೇಳೆಗೆ ಸೂಕ್ತವಾದ ಕೃತಿಗಳನ್ನು ಹಾಡುತ್ತಿದ್ದರು.

ಭಾಗವತದ ಕಾಲದಿಂದ ಭಗವಂತನ ಆರಾಧನಾ ರೂಪವಾದ ಭಜನೆಗೆ ಮಹತ್ವ ಉಂಟಾಗಿದೆ. ಈಗಿನ ಭಜನ ಪದ್ಧತಿಗೆ ತಿರುಪತಿಯ ತಾಳ್ಳಪಾಕಂ ವಾಗ್ಗೇಯಕಾರರು ಮೂಲಪುರುಷರೆಂದು ಪರಿಗಣಿಸಲಾಗಿದೆ. ದಾಸಶ್ರೇಷ್ಠ ಪುರಂದರದಾಸರು, ಬೋಧೇಂದ್ರ ಸದ್ಗುರು ಸ್ವಾಮಿ, ಶ್ರೀಧರವೆಂಕಟೇಶ ದೀಕ್ಷಿತರು, ಸದಾಶಿವಬ್ರಹ್ಮೇಂದ್ರ, ತ್ಯಾಗರಾಜರೂ, ಬಂಗಾಳದಲ್ಲಿ ಶ್ರೀಕೃಷ್ಣ ಚೈತನ್ಯರೂ, ಮಹಾರಾಷ್ಟ್ರದಲ್ಲಿ ಸಂತ ತುಕಾರಾಮ್ ಮುಂತಾದ ಹಲವು ಮಹಾನ್ ವ್ಯಕ್ತಿಗಳು ಭಜನ ಸಂಗೀತವನ್ನು ತಮ್ಮ ಹಲವು ಬಗೆಯ ರಚನೆಗಳಿಂದ ಸಂಪದ್ಭರಿತವಾಗಿ ಮಾಡಿ ಬೆಳೆಸಿದರು. ಭಜನ ಪದ್ಧತಿಗೆ ಮಹತ್ವ ಉಂಟುಮಾಡಿದರು. ಸ್ವಾತಿ ತಿರುನಾಳ್ ಮಹಾರಾಜರು ನವವಿಧ ಭಕ್ತಿಯನ್ನು ಕುರಿತು ನವರತ್ನ ಮಾಲಿಕಾ ಕೀರ್ತನೆಗಳೆಂಬ ಒಂಭತ್ತು ಕೀರ್ತನೆಗಳನ್ನು ರಚಿಸಿರುವುದನ್ನು ಇಲ್ಲಿ ಸ್ಮರಿಸಬಹುದು.

ಚಲಿಸುವ ಭಜನಗೋಷ್ಠಿಯು ಒಂದು ಕಡೆ ನಿಂತು ಒಂದು ಹಾಡನ್ನು ಸಂಪೂರ್ಣವಾಗಿ ಹಾಡಿ ನಂತರ ನಾಮಾವಳಿ ಅಥವಾ ದಿವ್ಯನಾಮಕೀರ್ತನೆಯನ್ನು ಹಾಡುತ್ತಾ ಮುಂದುವರಿಯುತ್ತದೆ. ಇವು

ಗಳ ತಾಳ ಮತ್ತು ಗತಿಯು ಗೋಷ್ಠಿಯು ಮುಂದಕ್ಕೆ ಹೋಗಲು ಅನುಕೂಲವಾಗಿದೆ. ಇದು ಮುಗಿದ ನಂತರ ಗೋಷ್ಠಿಯು ಒಂದು ಜಾಗದಲ್ಲಿ ನಿಂತು ಪುನಃ ಕೀರ್ತನೆಯನ್ನು ಹಾಡಿ ಮುಂದುವರಿಯುತ್ತದೆ. ಹೊರಟ ಸ್ಥಳಕ್ಕೆ ಹಿಂತಿರುಗುವವರೆಗೆ ಇದೇ ಕ್ರಮವನ್ನು ಅನುಸರಿಸುತ್ತಾರೆ.

ಮಂದಿರ, ದೇವಾಲಯ ಅಥವಾ ಮನೆಯಲ್ಲಿ ನಡೆಯುವ ಭಜನೆಗೆ ಒಂದು ಕ್ರಮವನ್ನು ಗೊತ್ತು ಮಾಡಿದ್ದಾರೆ. ಇದನ್ನು ಕ್ರಮವಾಗಿ ಅನುಸರಿಸಲು ಹಲವು ಗಂಟೆಗಳ ಕಾಲಬೇಕು. ಏಕಾದಶಿ ಮತ್ತು ಇತರ ಪವಿತ್ರ ದಿನಗಳಂದು ಭಜನೆ ಮಾಡುವ ಕ್ರಮವು ಈ ರೀತಿ ಇದೆ :-- ೧) ನಾಮಾವಳಿ, ೨) ಗಣೇಶ, ಸರಸ್ವತಿ, ಪ್ರಹ್ಲಾದ, ನಾರದ ಮತ್ತು ಇತರ ಮಹಾಭಕ್ತರ ಸ್ತುತಿ ರೂಪವಾದ ಶ್ಲೋಕಗಳು ಮತ್ತು ನಾಮ ಮಹಿಮೆಯನ್ನು ಕುರಿತ ಶ್ಲೋಕಗಳು, ೩) ತೋದಯ ಮಂಗಳ, ೪) ಗುರುಕೀರ್ತನ, ೫) ಜಯದೇವನ ಒಂದು ಅಷ್ಟಪದಿ, ೬) ನಾರಾಯಣ ತೀರ್ಥರ ಒಂದು ತರಂಗ, ೭) ಗಣೇಶ, ಸುಬ್ರಹ್ಮಣ್ಯ, ಸರಸ್ವತಿ, ಶಿವ ಮತ್ತು ಪಾರ್ವತಿ ಇವರ ಸ್ತುತಿ ರೂಪವಾದ ಹಾಡುಗಳು, ೮) ಉಪಚಾರಕೀರ್ತನೆ, ೯) ರಾಮ, ಸೀತಾ ಮತ್ತು ಆಂಜನೇಯ ಸ್ತುತಿಯ ಹಾಡುಗಳು, ೧೦) ಶ್ರೀಕೃಷ್ಣನ ಸ್ತುತಿಯ ಹಾಡುಗಳು. ಇದರೊಂದಿಗೆ ಭಜನೆಯ ಪೂರ್ವಾರ್ಧವು ಮುಕ್ತಾಯವಾಗುತ್ತದೆ. ಆಗ ಅಲ್ಲಿ ನೆರೆದಿರುವವರಿಗೆ ಕೆಲವು ಹಾಡುಗಳನ್ನು ಹಾಡಲು ಅವಕಾಶವುಂಟು.

ಭಜನೆಯ ಉತ್ತರಾರ್ಧವು ದಿವ್ಯನಾಮ ಸಂಕೀರ್ತನೆಯಿಂದ ಆರಂಭವಾಗುತ್ತದೆ. ದೇವರ ಪಟ ಅಥವಾ ವಿಗ್ರಹದ ಸಮೀಪದಲ್ಲಿಡಲಾದ ದೀಪವನ್ನು ಸಭಾಂಗಣದ ಮಧ್ಯದಲ್ಲಿಡಲಾಗುವುದು. ಗೊತ್ತಾದ ಕೆಲವು ಭಕ್ತರು ಈ ದೀಪದ ಪ್ರದಕ್ಷಿಣೆಯನ್ನು ನಿಧಾನವಾಗಿ ಮಾಡುತ್ತಾ ದಿವ್ಯನಾಮ ಸಂಕೀರ್ತನೆ ಮಾಡುತ್ತಾರೆ. ಇವು ಸಂದರ್ಭಕ್ಕೆ ಸೂಕ್ತವಾದ ರಚನೆಗಳಾಗಿರುತ್ತವೆ. ಗೋಪಿಕಾ ಗೀತೆಯನ್ನು ಹಾಡಿ ನಂತರ ದೀಪವನ್ನು ಮೊದಲಿನ ಸ್ಥಳದಲ್ಲಿಡುವರು. ಮಂಗಳದೊಡನೆ ಭಜನೆಯು ಮುಕ್ತಾಯವಾಗಿ ಪ್ರಸಾದ ವಿನಿಯೋಗದ ನಂತರ ಭಜನ ಗೋಷ್ಠಿಯು ಸ್ವಸ್ಥಾನಕ್ಕೆ ಹಿಂತಿರುಗುತ್ತದೆ. ಇದರಲ್ಲಿ ಭಾಗವಹಿಸಿದ ವ್ಯಕ್ತಿಗೆ ತಾನು ಪರಿಶುದ್ಧನಾದೆನೆಂಬ ಭಾವನೆ ಉಂಟಾಗುತ್ತದೆ.

ತೇವಾರಂ ಭಜನೆಯಲ್ಲಿ ತೇವಾರಂ, ತಿರುವ ಚಕಂ, ಇತ್ಯಾದಿ ತಮಿಳು ಭಕ್ತಿಗೀತೆಗಳನ್ನು ಹಾಡುವುದರಲ್ಲಿ ಶಿಕ್ಷಣಪಡೆದ ಭಾಗವತರಾಗಿದ್ದು ಭಜನ ನಡೆಸುತ್ತಾರೆ. ಈ ಭಜನೆಗಳು ಒಂದೇ ಕಡೆ ಅಥವಾ ಬೀದಿಗಳಲ್ಲಿ ನಡೆಯುತ್ತವೆ. ರಾಮಭಜನೆ, ಗಣೇ

**ಶ್ರೀ ವೆಂಕಟೇಶ್ವರ ಕೇಂದ್ರ ಗ್ರಂಥಾಲಯ**
**ಸಂಶೋಧನ ಕೇಂದ್ರ -- ತಿರುಪತಿ**

# ಒಂದು ವಿನಂತಿ

1993 ರಲ್ಲಿ ತಿ.ತಿ.ದೇ. ಆಡಳಿತ ಮಂಡಳಿಯ ವಜ್ರಮಹೋತ್ಸವ ವರ್ಷದಲ್ಲಿ ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ, ಸಂಶೋಧನ ಕೇಂದ್ರವನ್ನು ನೆಲೆಗೊಳಿಸಿ ಅದನ್ನು ಸ್ವಾಮಿ ಭಕ್ತರ ಸೇವೆಯಲ್ಲಿ ಸಮರ್ಪಿಸಲಾಯಿತು. ನಮ್ಮ ಪರಂಪರೆಯ ವಾಸ್ತು ಶಿಲ್ಪದ ಹಾಗೂ, ಆಧುನಿಕ ವಾಸ್ತು ಶಾಸ್ತ್ರದ ಉತ್ತಮಾಂಶಗಳನ್ನು ಒಳಗೊಂಡು ನಿಂತಿರುವ ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಅಪೂರ್ವ ಪುಸ್ತಕಾಗಾರವಾಗಿ ವೇದೋಪನಿಷತ್ತುಗಳ, ಇತಿಹಾಸ ಪುರಾಣಗಳ, ಶಾಸ್ತ್ರ ಭಗವದ್ಗೀತೆಗಳ ಉಪಾದೇಯವೂ ಭವ್ಯವೂ ಆದ ಸಂದೇಶವನ್ನು ಪ್ರಸಾರಮಾಡುವ ಉದ್ದೇಶ ಹೊಂದಿದೆ.

ಸನಾತನ ಧರ್ಮದ ವೈವಿಧ್ಯಮಯ ಮುಖಗಳ, ಭಾರತೀಯ ಚಿಂತನ ಶೀಲತೆಯ, ತತ್ತ್ವ, ಧರ್ಮ, ಸಂಗೀತವೇ ಮೊದಲಾದ ಪರಂಪರಾ. ಗತ ಸಂಪದ್ಭರಿತ ಸಂಸ್ಕೃತಿಯಲ್ಲಿ ಸಂಶೋಧನೆ ನಡೆಸಲು ಅವಕಾಶವನ್ನು ಶ್ರೀ ವೆಂಕಟೇಶ್ವರ ಕೇದ್ರಗ್ರಂಥಾಲಯ ಕಲ್ಪಿಸುವುದು. ಬಾರತೀಯ ಶಾಸ್ತ್ರದ ಬಗ್ಗೆ ಅಪರೂಪವೂ, ಅಮುದ್ರಿತವೂ ಆದ ಅಂಶಗಳನ್ನು ಪ್ರಕಟಿಸುವುದೂ, ಸಂಸ್ಕೃತ ಪಾಠಗಳ ಮೂಲ ಪ್ರತಿಗಳನ್ನೂ ಅವುಗಳ ಸರಳಾನುವಾದಗಳನ್ನೂ ಪ್ರಕಟಿಸುವುದೂ, ನಮ್ಮ ಉದ್ದೇಶವಾಗಿದೆ. ಈ ಪುಸ್ತಕ ಭಂಡಾರವು ಭಾರತೀಯ ಸಂಸ್ಕೃತಿಯ ದೇವಾಲಯವಾಗಿ, ಶಿಕ್ಷಣ, ಸಂಶೋಧನೆಯ ಮಹತ್ ಸಂಸ್ಥೆಯನ್ನಾಗಿ ಮಾಡುವುದೇ ನಮ್ಮ ಪವಿತ್ರತಮ ಕರ್ತವ್ಯವಾಗಿದೆ. ಇಡೀ ಯೋಜನೆ ಸಾಕಷ್ಟು ಸಂಪನ್ಮೂಲವನ್ನು ಅಪೇಕ್ಷಿಸುತ್ತದೆ.

**ಹೀಗಾಗಿ, ಸಾರ್ವಜನಿಕರಲ್ಲಿ, ಸ್ವಯಂಸೇವಾ ಸಂಸ್ಥೆಗಳಲ್ಲಿ ಧನದ ರೂಪದಲ್ಲಿ ಆಗಲೀ, ಪುಸ್ತಕ ರೂಪದಲ್ಲಿಯಾಗಲೀ ಉದಾರವಾದ ದೇಣಿಗೆಗಳನ್ನು ನೀಡಬೇಕೆಂದು ಮನವಿ ಮಾಡುತ್ತೇವೆ.**

ವ್ಯಕ್ತಿಗಳು ಹಾಗೂ ಸಂಸ್ಥೆಗಳು ತಮ್ಮಲ್ಲಿನ ಅಪರೂಪದ ಪುಸ್ತಕಗಳನ್ನೂ ಗ್ರಂಥಾಲಯಕ್ಕೆ ನೀಡಬಹುದು.

ತಮ್ಮ ಎಲ್ಲ ದೇಣಿಗೆಗಳನ್ನು ಪುಸ್ತಕವಾಗಲೀ, ಹಣವಾಗಲೀ ಕಳುಹಿಸಬೇಕಾದ ವಿಳಾಸ -- ವಿಶೇಷಾಧಿಕಾರಿ, ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಹಾಗೂ ಸಂಶೋಧನ ಕೇಂದ್ರ -- ತಿರುಪತಿ -- 517 502.

ಭಜನೆ ಇತ್ಯಾದಿ ಸಾಮೂಹಿಕ ಭಜನೆಗಳು ಕರ್ನಾಟಕದಲ್ಲಿ ಮತ್ತು ದಕ್ಷಿಣ ಭಾರತದ ಇತರ ಭಾಗಗಳಲ್ಲಿ ರೂಢಿಯಲ್ಲಿವೆ.

ಸಾಮಾನ್ಯವಾಗಿ ಭಕ್ತಿಯು ಒಂಭತ್ತುವಿಧ. ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಮ್ ಅರ್ಚನಂ ವಂದನಂ ದಾಸ್ಯಂ ಸಖ್ಯಂ ಆತ್ಮನಿವೇದನ್ ಎಂಬಂತೆ ವಿಷ್ಣುವಿನ ಹಿರಿಮೆಯನ್ನು ಕೇಳುವುದು, ಹಾಡುವುದು( ಸ್ಮರಿಸುವುದು, ಅವನ ಪಾದಗಳನ್ನು ಸೇವಿಸುವು, ಪೂಜಿಸುವುದು( ವಂದಿಸುವುದು, ಆತ್ಮನಿವೇದನೆ ಮಾಡಿಕೊಳ್ಳುವುದು. ಈ ಭಕ್ತಿಯು ಹಲವು ರೀತಿಯಲ್ಲಿ ವ್ಯಕ್ತವಾಗುತ್ತದೆ - ಗುಣಮಾಹಾತ್ಮಾಸಕ್ತಿ, ರೂಪಾಸಕ್ತಿ, ಪೂಜಾಸಕ್ತಿ, ಸ್ಮರಣಾಸಕ್ತಿ, ದಾಸ್ಯಾಸಕ್ತಿ, ಸಖ್ಯಾಸಕ್ತಿ, ವಾತ್ಸಲ್ಯಾಸಕ್ತಿ, ಕಾಂತಾಸಕ್ತಿ, ಆತ್ಮನಿವೇದನಾಸಕ್ತಿ, ತನ್ಮಯಾಸಕ್ತಿ, ಪರಮ ವಿರಹಾಸಕ್ತಿ - ಈ ಹಲವನ್ನು ಕೀರ್ತನೆಗಳಲ್ಲಿ ವ್ಯಕ್ತಗೊಳಿಸಿರುವುದು ಗಮನಾರ್ಹ.

## ನಾಮಮಾಹಾತ್ಮ್ಯ:

ಈ ಒಂಭತ್ತು ವಿಧಗಳಲ್ಲಿ ಭಗವಂತನ ಗುಣಗಳನ್ನು ಕೀರ್ತಿಸುವುದು ಒಂದು ವಿಧ. ಇದೇ ಭಜನೆ. ಹೆಸರಿನಲ್ಲಿ ಏನಿದೆ ಎನ್ನಬಹುದು. ಹೆಸರಿನಲ್ಲಿ ಎಲ್ಲವೂ ಇದೆ. ಹೆಸರೇ ಕೀರ್ತಿ. ಅದು ಒಂದು ಗುಣದ ಸಾರ. ವ್ಯಕ್ತಿಯ ಗುಣ ವಿಶೇಷವನ್ನು ತಿಳಿಸುವ ವಾಚಕ. (ಯಾನಿ ನಾಮಾನಿ ಗೌಣಾನಿ ವಿಖ್ಯಾತಾನಿ ಮಹಾತ್ಮನಃ - ವಿಷ್ಣುಸಹಸ್ರನಾಮ). ಭಗವಂತನ ಪ್ರತಿಯೊಂದು ನಾಮವೂ ಅವನ ಗುಣ, ಕೀರ್ತಿ, ಶಕ್ತಿ ಇತ್ಯಾದಿಗಳನ್ನು ಸೂಚಿಸುತ್ತದೆ. (ನಾಮಾನ್ಯ ನಂತಸ್ಯ ಯಶೋಂಗಿತಾನಿ - ಭಾಗವತ). ಭಗವಂತನ ಗುಣಗಳೂ ಅನಂತ, ನಾಮಗಳೂ ಅನಂತ. ಇವುಗಳ ಹಿರಿಮೆಯನ್ನು ಕುರಿತು ಪುರಂದರ ದಾಸರು ಹೀಗೆ ಹೇಳಿದ್ದಾರೆ :--

ಹರಿಯ ಒಂಭತ್ತು ಭಕ್ತಧೀರ
ಮರಳಿ ಸಂಸೃತಿಯ ದಾರಿಗೆ ಹುಟ್ಟಿಬಾರ
ದುರಾಚಾರ ದುಷ್ಕೃತಿಗಳನು ಕಂಡು ಸೇರ
ಹಿರಿಯರೊಳು ಬಿರುನುಡಿಯ ಜಿಹ್ವೆಗೆ ತಾರ
ಪುರಂದರ ವಿಠಲರಾಯನ ಉದಾರ
ಚರಣಾಬ್ಜ ನಿಷ್ಠೆ ಅಂಗಡಿ ಇಟ್ಟುಕ್ತೋರ

ಈ ಯುಗದಲ್ಲಿ ಯಾವವೇಳೆ ಅಥವಾ ಅವಸ್ಥೆಯಲ್ಲಾದರೂ ಭಗವನ್ನಾಮವನ್ನು ಜಪಿಸಬಹುದು. 'ಯಜ್ಞಾನಾಂ ಜಪಯಜ್ಞೋಸ್ಮಿ'(ಭಗವದ್ಗೀತೆ) ಎಲ್ಲ ಯಜ್ಞಗಳಲ್ಲಿ ಭಗವಂತನೇ ಜಪಯಜ್ಞವಾಗಿದ್ದಾನೆ. ಭಗವಂತನನಾಮಗಳನ್ನು ಭಕ್ತಿಯಿಂದ ಸ್ತುತಿಸುವುದೇ ಅತ್ಯಂತ ಶ್ರೇಷ್ಠವಾದ ಧರ್ಮವೆಂದು ತಿಳಿಸಿ ಭೀಷ್ಮನು ವಿಷ್ಣುವಿನ ಸಹಸ್ರನಾಮಗಳನ್ನು ಹೇಳಿದ್ದಾನೆ. 'ಕೃಷ್ಣಾ ಎನಬಾರದೇ' ಗೋವಿಂದನನಾಮ ಒಂದೇ ಸಾಲದೇ, ನಾಮಕೀರ್ತನೆ ಅನುದಿನಮಾಳ್ಪಗೆ ನರಕ ಭಯಗಳುಂಟೇ' ಇತ್ಯಾದಿ ನಾಮಕೀರ್ತನೆಯ ಹಿರಿಮೆಯನ್ನು ಕುರಿತು ಪುರಂದರದಾಸರು ಹಾಡಿದ್ದಾರೆ. ನಾಮಘೋಷದಿಂದ ಭಗವಂತನಿಗೆ ಅತ್ಯಂತ ಹೆಚ್ಚಿನ ಸಂತೋಷವಾಗುತ್ತದೆಂದು ಸದ್ಗುರುತ್ಯಾಗರಾಜರು ಪರಿಪಾಲಯಮಾಂ (ದರ್ಬಾರ್) ಎಂಬ ಕೀರ್ತನೆಯಲ್ಲಿ ಹೇಳಿದ್ದಾರೆ. ಇತರ ಯಜ್ಞಗಳು ಮತ್ತು ಧರ್ಮಗಳಿಗಿಂತ ನಾಮಸ್ತೋತ್ರ ಅಥವಾ ಜಪಯಜ್ಞವು ಶ್ರೇಷ್ಠವೆಂಬುದನ್ನು ಆಚಾರ್ಯರು ವಿವರಿಸಿದ್ದಾರೆ. ಇದೊಂದು ಅಹಿಂಸಾಯಾಗ. ಇದಕ್ಕೆ ಜನಸಹಾಯವಾಗಲೀ ಧನವಾಗಲೀ, ಗೊತ್ತಾದ ಸ್ಥಳ ಅಥವಾ ವಿಧಾಯಕವಾಗಲೀ, ವೇಳೆಯಾಗಲೀ ಬೇಕಿಲ್ಲ. ನಾಮಸಂಕೀರ್ತನದಿಂದ ಮೋಕ್ಷವು ಲಭ್ಯವಾಗುತ್ತದೆ. (ಧ್ಯಾಯನ್ ಕೃತೇ ಯಜನ್ ಯಜ್ಞೈ ಸ್ತ್ರೇತಾಯಾಂ ದ್ವಾಪರೇ ಅರ್ಚಯನ್ ಯದಾಪ್ನೋತಿ ತದಾಪ್ನೋತಿಕಲೌ ಸಂಕೀರ್ತ್ಯ ಕೇಶವಮ್ - ವಿಷ್ಣುಪುರಾಣ) ಸಂಕೀರ್ತನ ಅಥವಾ ಭಜನೆಯ ಹಿರಿಮೆಯನ್ನು ಕುರಿತು 'ಭಜನ ಸೇಯರಾದಾ (ಅರುಣ) ಎಂಬ ಕೃತಿಯಲ್ಲಿ, ಸಂಸಾರಸಾಗರವನ್ನು ದಾಟಿಸುವ ಶ್ರೀರಾಮನ ಮಧುರ ನಾಮಕೀರ್ತನೆ ಮಾಡಿ ಎಲ್ಲರೂ ಉದ್ಧಾರವಾಗುತ್ತಾರೆ; ಭಜನಸೇಯವೇ ಮನಸಾ ಪರಮಭಕ್ತಿತೋ (ಕಲ್ಯಾಣಿ) ಎಂಬ ಕೃತಿಯಲ್ಲಿ 'ಭಗವಂತನ ದಿವ್ಯರೂಪವನ್ನು ಆತ್ಮೀಯವಾಗಿ ಅರಿತು ಪರಮಭಕ್ತಿಯಿಂದ ಭಜಿಸಬೇಕು' ಎಂದೂ; ಭಜರೇ ರಘುವೀರಂ (ಕಲ್ಯಾಣಿ) ಎಂಬ ದಿವ್ಯನಾಮ ಕೀರ್ತನೆಯಲ್ಲಿ ರಘುವೀರನನ್ನು ಭಜಿಸುವುದೇ ಪರಮಾರ್ಥ ಲಕ್ಷ್ಯವೆಂದೂ, ಭಜನಸೇಯು ಮಾರ್ಗಮುನು (ನಾರಾಯಣಿ) ಎಂಬ ಕೃತಿಯಲ್ಲಿ 'ಭಗವಂತನೊಂದಿಗೆ ಅನೇಕ ಬಗೆಯ ಸಂಬಂಧವನ್ನು ಭಜಿಸಿ ಪೂಜಿಸುವ ಭಕ್ತರಿಗೆ ಯಮನ ಭಯವಿಲ್ಲವೆಂದೂ, ಭಜರಾಮಸತತಂ (ಹುಸೇನಿ), ಭಜರೇ ಭಜಮಾನಸರಾಮಂ (ಕನ್ನಡ) ಎಂಬ ದಿವ್ಯನಾಮಕೀರ್ತನೆಗಳಲ್ಲಿ ಶ್ರೀರಾಮನನ್ನು ಮನಸಾರ ಸದಾಭಜಿಸು ಎಂದು ಉಪದೇಶವಿತ್ತಿದ್ದಾರೆ. 'ರಾಮಮಂತ್ರವ ಜಪಿಸೋ, ಹರಿಭಜನೆ ಮಾಡೋ ನಿರಂತರ ಎಂಬ ಪುರಂದರ ದಾಸರ ಕೀರ್ತನೆಗಳನ್ನು ಮತ್ತು 'ಭಜಿಸಿ ಬದುಕಿಲೊ ಮಾನವ' ಎಂಬ ಕನಕದಾಸರ ಕೀರ್ತನೆಯನ್ನೂ ಇಲ್ಲಿ ಸ್ಮರಿಸಬಹುದು. ಭಗವನ್ನಾಮಕೀರ್ತನೆಯು ಹತ್ತಿಯನ್ನು ಅಗ್ನಿಯುಸುಟ್ಟು ಬಿಡುವಂತೆ (ತೀಯಿನಿಲ್ ತೂಶಾಹುಂ - ತಿರುಪ್ಪಾವೈ) ಭಗವನ್ನಾಮವು ನಮ್ಮ ಪಾಪಗಳನ್ನು ನಾಶಮಾಡುತ್ತದೆ. ಭಗವನ್ನಾಮವು ಯಾವಾಗಲೂ ನವೀನ, ಸುಂದರ, ಆಕರ್ಷಕ. ಭಗವನ್ನಾಮ ರಹಿತವಾದ ಸಾಹಿತ್ಯವು ಎಷ್ಟೇ ಸುಂದರವಾಗಿದ್ದರೂ ಅದು ಕಾಗೆಗಳು ಸ್ನಾನಮಾಡುವ ಕೊಚ್ಚೆಗುಂಡಿ ಇದ್ದಹಾಗೆ. ಅದು ಮುಕ್ತಾತ್ಮರಾದ ಹಂಸಗಳು ವಿಹರಿಸುವ ಮಾನಸ ಸರೋವರವಾಗುವುದಿಲ್ಲ (ತದೇವ ರಮ್ಯಂ ರುಚಿರಂ ನವಂ ನವಂ, ತದೇವ ಶಶ್ವನ್ಮನಸೋ ಮಹೋತ್ಸವಮ್, ತದೇವ ಶೋಕಾರ್ಣವ ಶೋಷಣಂ ನೃಣಾಂ, ಯದುತ್ತಮಂ ಶ್ಲೋಕಯಶೋನುಗೀತಯೋ || ನಯದ್ವಚಶ್ಚಿತ್ರ ಪದಂ ಹರೇರ್ಯಶಃ, ಜಗತ್ಪವಿತ್ರಂ ಪ್ರಗೃಹೀತ ಕರ್ಹಿಚಿತ್, ತದ್ವಾಯಸಂ ತೀರ್ಥಮುಶಂತಿಃ ಮಾನಸಾಃ ನ ಯತ್ರ ಹಂಸಾ ನಿರಮನ್ತ್ಯ ಶಿಕ್ಷವತ ||).

'ನಾಮ ಕುಸುಮಮುಲಚೇ ಪೂಜಿಂಚೆ ನರಜನ್ಮಮೇ ಜನ್ಮಮು (ಶ್ರೀರಾಗ) - ಭಗವನ್ನಾಮವೆಂಬ ಪುಷ್ಪಗಳಿಂದ ಅವನ್ನ ಪೂಜಿಸುವ ನರಜನ್ಮಕ್ಕೆ ಸಮಾನವಾದುದು ಯಾವುದು? ಎಂದು ಸದ್ಗುರು ತ್ಯಾಗರಾಜರು ಹಾಡಿದ್ದಾರೆ.

ಶಂಕರಾಚಾರ್ಯರಾದಿಯಾಗಿ ಎಲ್ಲ ಮಹಾಪುರುಷರೂ ಭಕ್ತರಾಗಿದ್ದು ಅನೇಕ ಭಕ್ತಿಸ್ತೋತ್ರಗಳನ್ನು ರಚಿಸಿದ್ದಾರೆ. ೧೭-೧೮ನೇ ಶತಮಾನಗಳಲ್ಲಿ ಅನೇಕ ವಿದ್ವಾಂಸರು, ಭಕ್ತರು ಮತ್ತು ಸನ್ಯಾಸಿಗಳು ನಾಮ ಸಿದ್ಧಾಂತವನ್ನು ಮತ್ತಷ್ಟು ಪುಷ್ಟೀಕರಿಸಿದರು. ಇವರಲ್ಲಿ ಪ್ರಮುಖರಾದ ಶ್ರೀಧರವೆಂಕಟೇಶ ದೀಕ್ಷಿತರು ಭಗವನ್ನಾಮವನ್ನು ಕುರಿತು ೬೦ ಶ್ಲೋಕಗಳಿರುವ ಆಖ್ಯಾಷಷ್ಠಿ ಮತ್ತು ಭಗವನ್ನಾಮ ಭೂಷಣ ಎಂಬ ಗ್ರಂಥಗಳನ್ನೂ, ನಂತರ ಬೋಧೇಂದ್ರ ಸದ್ಗುರು ಸ್ವಾಮಿಯವರು ಈ ಸಿದ್ಧಾಂತವನ್ನು ವಿವರಿಸಿ, ನಾಮಾಮೃತ ರಸಾಯನ, ನಾಮಾಮೃತ ರಸೋದಯ, ನಾಮಾಮೃತ ಸೂರ್ಯೋದಯ, ಭಗವನ್ನಾಮಾಮೃತಾರ್ಣವ ಎಂಬ ಗ್ರಂಥಗಳನ್ನು ರಚಿಸಿದರು. ತ್ಯಾಗರಾಜರು ತಮ್ಮ ನೌಕಾಚರಿತ್ರವೆಂಬ ಗೇಯರೂಪಕದಲ್ಲಿ ವಂದಿಸಿರುವ ಶ್ರೀರಾಮ ಕೃಷ್ಣಾನಂದರೂ ಬಹುಶಃ ನಾಮಮಾಹಾತ್ಮ್ಯದ ಪ್ರತಿಪಾದಕರಾಗಿದ್ದರೆನ್ನಬಹುದು. ಈ ಸಿದ್ಧಾಂತ ರೀತ್ಯಾ ಭಗವಂತನ ನಾಮವೇ ಅವನ ರೂಪ. ಅದು ಕೇವಲ ಉಪಾಯ ಮಾತ್ರವಲ್ಲ. ಉಪೇಯವೂ ಆಗಿದೆ ಎಂಬ ಸಿದ್ಧಾಂತವನ್ನು ಕುರಿತು ಉಪೇಯ ನಾಮ ವಿವೇಕ ಎಂಬ ಗ್ರಂಥದಲ್ಲಿ ಕಾಂಚೀಪುರದ ಉಪನಿಷದ್ ಬ್ರಹ್ಮೇಂದ್ರರು ಪ್ರತಿಪಾದಿಸಿದ್ದಾರೆ.

ಇದನ್ನು ಕುರಿತು ಈ ಗ್ರಂಥದಲ್ಲಿ ಈ ರೀತಿ ವಿವರಿಸಿದ್ದಾರೆ.

ಶ್ರೀರಾಮ ಏವ ನಾಮಸ್ಯಾ
ಸ್ವಾಭಿಧಾನ ಮುಪೇಯತಃ

ಉಪೇಯ ರೂಪಾವಸ್ಥಾನಂ
ನಾಮಾರ್ಥಂ ಇತಿ ವಿಶ್ರುತಮ್
ಶ್ರೀರಾಮ ಏವ ನಾಮಸ್ಯಾತ್
ಶ್ರೀರಾಮಸ್ಯ ನಾಮ ಇತಿ
ನಾಭಿಧಾನಂ ಕುತಃ?
ನಾಮ್ನ ಉಪೇಯತ್ವಾತ್

ತ್ಯಾಗರಾಜರು ಸ್ಮರಣೇ ಸುಖಮು (ಜನರಂಜನಿ) ನಾಮರೂಪಮೇ ಹೃದಯಮು ನಿಂಡಿ, ನಾಜೀವಾಧಾರ (ಬಿಲಹರಿ) - ನಾ ಜಪವರ್ಣ ರೂಪಮಾ' ಎಂದು ಹೇಳಿರುವುದು ಗಮನಾರ್ಹ. ಅವರು ರಾಮನಾಮಸಿದ್ಧಾಂತದ ಪ್ರತಿಪಾದಕರಾಗಿದ್ದರು (ರಾಮನಾಮಮು ಸಾರಮೇಗಾನಿ ಅನ್ಯ ಮಾರ್ಗ ವಿಚಾರಮೇಟಿಕಿ ಓ ಮನಸಾ - (ಪಂತುವರಾಳಿ)

ಈ ಉಪನಿಷದ್ ಬ್ರಹ್ಮೇಂದ್ರರು ಯಾರು ? ಇವರು ಪೂರ್ವಾಶ್ರಮದಲ್ಲಿ ತ್ಯಾಗರಾಜರ ತಂದೆ ರಾಮಬ್ರಹ್ಮರ ಸಹಪಾಠಿಯಾಗಿದ್ದರು. ಇವರ ಹೆಸರು ರಾಮಚಂದ್ರೇಂದ್ರ. ಇವರು ೧೦೮ ಉಪನಿಷತ್ತುಗಳು ಮತ್ತು ಭಗವದ್ಗೀತೆಗೆ ಭಾಷ್ಯವನ್ನು ಬರೆದು ಉಪನಿಷದ್ ಬ್ರಹ್ಮೇಂದ್ರರೆಂದು ಪ್ರಸಿದ್ಧರಾದರು. ಇವರು ದಿವ್ಯನಾಮ ಸಂಕೀರ್ತನ, ರಾಮತರಂಗ, ರಾಮಗೀತಾವಳಿ, ಉಪೇಯ ನಾಮವ್ಯಾಖ್ಯ ಉಪೇಯ ನಾಮವಿವೇಕ, ರಾಮನಾಮ ಮಾಹಾತ್ಮ ಇತ್ಯಾದಿ ಹಲವುಗ್ರಂಥಗಳನ್ನು ರಚಿಸಿದರು. ಇವರು ವಾಗ್ಗೇಯಕಾರರೂ ಆಗಿದ್ದರು. ರಾಮಭಕ್ತಿ ಮತ್ತು ರಾಮನಾಮ ಸಂಕೀರ್ತನ ಅಥವಾ ಭಜನೆಯ ಚಳುವಳಿಯನ್ನು ಪ್ರಬಲಗೊಳಿಸಿ ಹರಡಿದರು. ತ್ಯಾಗರಾಜರನ್ನು ಕಾಂಚೀಪುರಕ್ಕೆ ಬರಮಾಡಿಕೊಂಡರು. ತ್ಯಾಗರಾಜರು ಉಪನಿಷದ್ ಬ್ರಹ್ಮೇಂದ್ರರ ಇಚ್ಛೆಯಂತೆ ಅಲ್ಲಿ ಕೆಲವು ದಿನಗಳ ಕಾಲವಿದ್ದು ಸಂಕೀರ್ತನ ಕೈಂಕರ್ಯವನ್ನು ನಡೆಸಿದರು. ಇವರು ಗರ್ಭಭಾಗವತರಾಗಿದ್ದು ಸ್ವಾಭಾವಿಕವಾಗಿ ಉಪನಿಷದ್ ಬ್ರಹ್ಮೇಂದ್ರರಿಂದ ಪ್ರಭಾವಿತರಾದರು ಮತ್ತು ದಿವ್ಯ ನಾಮ ಕೀರ್ತನೆಗಳನ್ನು ರಚಿಸಿದರು. ಉಪನಿಷದ್ ಬ್ರಹ್ಮೇಂದ್ರರು ಹೆಚ್ಚು ಸಂಖ್ಯೆಯಲ್ಲಿ ಹಲವು ರಾಗಗಳಲ್ಲಿ ದಿವ್ಯ ನಾಮಕೀರ್ತನೆಗಳನ್ನು ರಚಿಸಿದ್ದಾರೆ. ಇವುಗಳ ಪ್ರಭಾವವನ್ನು ತ್ಯಾಗರಾಜರ ದಿವ್ಯ ನಾಮ ಕೀರ್ತನೆಗಳಲ್ಲಿ ಕಾಣಬಹುದು. ಬ್ರಹ್ಮೇಂದ್ರರು ಬಳಸಿರುವ ಕನಕಾಂಬರ, ಕನಕವಸನ, ಚೇಲ ಕನಕ, ಹಾಟಕ ಚೇಲ, ಭಕ್ತ ಚಂದನ, ಸಕಲೋನ್ನತ, ರಾಜವಂದ್ಯ ಸೀತಾಮನೋಹರ, ರಾಜೀವಾಕ್ಷ, ನಾದಸದನ, ವಿಕಳೇಬರಕೈವಲ್ಯ, ಭೂತಭೌತಿಕ ಮುಂತಾದ ಗುಣವಾಚಕಗಳನ್ನು ತ್ಯಾಗರಾಜರ ರಚನೆಗಳಲ್ಲೂ, ಮುತ್ತುಸ್ವಾಮಿ ದೀಕ್ಷಿತರ ರಚನೆಗಳಲ್ಲೂ ನೋಡಬಹುದು. ತ್ಯಾಗರಾಜರು ತಮ್ಮ ಹಲವಾರು ರಚನೆಗಳಲ್ಲಿ ರಾಮನಾಮಜಪ, ನಾಮಘೋಷದ ಗುಣಮಾಹಾತ್ಮೆಯನ್ನು ಕೊಂಡಾಡಿದ್ದಾರೆ. ಅಜಾಮಿಳನ ಮತ್ತು ಬೇಡನಾಗಿದ್ದ ವಾಲ್ಮೀಕಿಯು ಋಷಿಯಾದ ಕಥೆಗಳು ಸ್ವಲ್ಪ ವಿಪರೀತವಾಯಿತು ಎಂದು ಅವರಿಗೆ ಎನ್ನಿಸಿರಬೇಕು. ಆದ್ದರಿಂದ ನಾಮಕೀರ್ತನೆ ಯಾಂತ್ರಿಕವಾದುದಲ್ಲ. ಅದರ ಅರ್ಥವನ್ನು ತಿಳಿದು ಭಕ್ತಿಯಿಂದ ಧ್ಯಾನಿಸಿ ಕೀರ್ತಿಸಬೇಕೆಂದು ಒತ್ತಿ ಹೇಳಿದ್ದಾರೆ. ಉಪನಿಷದ್ ಬ್ರಹ್ಮೇಂದ್ರರು ಹೀಗೆ ಹೇಳಿದ್ದಾರೆ--

ಯ ಇತ್ಥಂ ರಾಮನಾಮಾರ್ಥಂ
ಜ್ಞಾತ್ವಾ ನಾಮಸ್ಮರೇತ್ ಸದಾ
ಸಯಾತಿ ಪರಮಾದ್ವೈತ
ಮಹಾ ಸಾಮ್ರಾಜ್ಯ ವೈಭವಮ್

ಈ ಶ್ಲೋಕದ ಭಾವವು ತ್ಯಾಗಲಾಜರ 'ತೆಲಿಸಿ ರಾಮಚಿಂತನತೋ (ಪೂರ್ಣಚಂದ್ರಿಕಾ) ಎಂಬ ಪಲ್ಲವಿಯಲ್ಲಿ ಪ್ರತಿಧ್ವನಿಗೊಂಡಿದೆ. ರಾಮನಾಮದಲ್ಲಿ ನಿಜಪ್ರೇಮವಿಲ್ಲದ ಬದುಕು ನಿರರ್ಥಕ (ಪಾಹಿ ಪರಮಾತ್ಮ- ವರಾಳಿ) ಎಂದು ಅವರು ಹೇಳಿದ್ದಾರೆ.

## ತ್ಯಾಗರಾಜರ ಕೊಡುಗೆ :

ಹೀಗೆ ಸದ್ಗುರು ತ್ಯಾಗರಾಜರು ನಾಮಸಿದ್ಧಾಂತದ ಪರಂಪರೆಯನ್ನು ಮುಂದುವರಿಸಿ ಅದನ್ನು ಪುಷ್ಟೀಕರಿಸಿದರು. ಅವರ ದಿವ್ಯನಾಮಕೀರ್ತನೆಗಳು ಸುಮಾರು ೭೭ ಇವೆ. ಇವು ಭಗವನ್ನಾಮಾವಳಿಯಲ್ಲದೆ, ಅವರ ಭಾವನೆಗಳು, ರಾಮಾಯಣದ ಪ್ರಸಂಗಗಳು, ಅವರ ಅಚಲಭಕ್ತಿ, ಸೌಂದರ್ಯಾನುಭೂತಿ, ಶರಣಾಗತಿ, ಸುಂದರವಾದ ರೀತಿಯಲ್ಲಿ ನಿಂದೆ ಇತ್ಯಾದಿಗಳನ್ನು ಒಳಗೊಂಡಿವೆ. ಇವು ಅತ್ಯಂತ ದೀರ್ಘವಾದ ರಚನೆಗಳು. 'ಜಯಜಯ ರಘುರಾಮ' (ಗೌರಿ) ಎಂಬುದು ೨೪ ಚರಣಗಳುಳ್ಳ ಕೀರ್ತನೆ. ಇವು ಸರಳ ಸುಂದರವಾದ ಸ್ವರ ತರಂಗ, ರಾಮುನಿ, ಯಾಗಮುಕಾಚಿನ, ಸದ್ಗುಣ ಧಾಮುನಿ, ಧೀರುನಿ, ದೈತ್ಯವಿದಾರುನಿ, ಲೋಕಧಾರುನಿ, ವಂದಿತ-ಸುರಮುನಿ ಇತ್ಯಾದಿ ಅಂತ್ಯಪ್ರಾಸಗಳಿಂದ ಕೂಡಿದ್ದು ಗೋಷ್ಠಿಗಾನದಲ್ಲಿ ಕಿವಿಗೆ ಇಂಪಾಗಿರುವುದಲ್ಲದೆ ಪರಿಣಾಮಕಾರಿಯಾಗಿವೆ. ಇವುಗಳಲ್ಲಿ ಅನುಪಲ್ಲವಿ ಇಲ್ಲ. ಸಂಗೀತವು ಸರಳ. ಇವು ಭಜನ ಸಂಪ್ರದಾಯಕ್ಕೆ ಸೇರಿದ ರಚನೆಗಳು. ತ್ಯಾಗರಾಜರು ಪ್ರತಿ ಏಕಾದಶಿ ಮತ್ತು ಇತರ ಪವಿತ್ರ ದಿನಗಳಂದು ತಮ್ಮ ಶಿಷ್ಯರು ಮತ್ತು ಇತರ ಭಾಗವತರೊಡನೆ ಭಜನೆ ಮಾಡುತ್ತಿದ್ದರು. ಉಂಛವೃತ್ತಿಗಾಗಿ ಹೋಗುವಾಗ ಶಿಷ್ಯರೊಡಗೂಡಿ ದಿವ್ಯನಾಮಕೀರ್ತನೆಗಳನ್ನು ಹಾಡುತ್ತಿದ್ದರು. ತಿರುವಯ್ಯಾರಿನ ಸಪ್ತಸ್ಥಾನ ಉತ್ಸವ ಮತ್ತು ಇತರ ಉತ್ಸವಗಳಲ್ಲಿ ಭಜನಗೋಷ್ಠಿ ಸಹಿತ ಭಾಗವಹಿಸಿ ಆಯಾವೇಳೆಗೆ ಸೂಕ್ತವಾದರಾಗಗಳ ಕೀರ್ತನೆಗಳನ್ನು ಹಾಡುತ್ತಿದ್ದರು. ಇವುಗಳಲ್ಲಿ ಭಕ್ತಿಯ ಹಲವು ಭಾವಗಳನ್ನು ವ್ಯಕ್ತಗೊಳಿಸಿದ್ದಾರೆ. ಜಯ ಜಯ ಶ್ರೀ ರಘುರಾಮ ಎಂಬಕೀರ್ತನೆಯಲ್ಲಿ ದೈನ್ಯೋಕ್ತಿಯಿಂದ ಕೀರ್ತಿಸಿದ್ದಾರೆ. ದಯರಾನಿ ಎಂಬ ಕೀರ್ತನೆಯಲ್ಲಿ ಶ್ರೀರಾಮನು ತನಗೆ ಅನನ್ಯಗತಿಯೆಂದೂ, ಧರ್ಮಾತ್ಮನನ್ನಿಪ್ಪುಡು ದಯಜೂಡವೇ ಎಂಬ ರಮ್ಯವಾದ ನಿಂದಾ ಸ್ತುತಿಯಲ್ಲಿ ಶ್ರೀರಾಮನು ತನ್ನನ್ನು ಕರುಣಿಸಲು ಮರೆತಿರುವಂತಿದೆ ಎಂದೂ, ನಾಥಬ್ರೋವವೇ ಎಂಬ ಕೀರ್ತನೆಯಲ್ಲಿ ಶ್ರೀರಾಮನ ಧರ್ಮ ಪ್ರವೃತ್ತಿಯನ್ನು ಕೀರ್ತಿಸಿದ್ದಾರೆ. ನಾರಾಯಣ ಹರಿ ಎಂಬುದರಲ್ಲಿ ಲೋಕದ ಧೂರ್ತ ವರ್ತನೆಯ ಬಗ್ಗೆ ವಿಷಾದವನ್ನು ವ್ಯಕ್ತಗೊಳಿಸಿದ್ದಾರೆ. ಪರಿಪಾಲಯ ಪರಿಪಾಲಯ ಎಂಬ ಹಾಡಿನಲ್ಲಿ ತನ್ನ ಅನುಭವ ಸೌಂದರ್ಯವನ್ನೂ, ಅಂತರಂಗ ಪೂಜಾವಿಧಿಯನ್ನೂ, ಪಾಹಿ ರಾಮ ಎಂಬುದರಲ್ಲಿ ತಮ್ಮ ಭಗವದನುಭವವನ್ನೂ ಶ್ರೀರಾಮ ದಾಸದಾಸೋಹಂ ಎಂಬ ಕೀರ್ತನೆಯಲ್ಲಿ ವಿವೇಕ ಮತ್ತು ವೈರಾಗ್ಯವನ್ನು ಸರಳ ಸುಂದರವಾಗಿ ಉಪದೇಶಿಸಿ, ಶ್ರೀರಾಮನಲ್ಲಿ ಅನನ್ಯ ಭಕ್ತಿಯಿಂದ ದಾಸಭಕ್ತಿ ಮತ್ತು ಪಾದಸೇವನೆಯ ಮಹತ್ವವನ್ನು ವಿವರಿಸಿದ್ದಾರೆ.

ಹೀಗೆ ಗರ್ಭಭಾಗವತರಾದ ಸದ್ಗುರುತ್ಯಾಗರಾಜರು ಭಜನ ಪದ್ಧತಿಯ ಅನುಯಾಯಿಗಳಾಗಿದ್ದು ಕೀರ್ತನ ಸಾಹಿತ್ಯವನ್ನು ಸಮೃದ್ಧಗೊಳಿಸಿದರಲ್ಲದೆ, ಕರ್ನಾಟಕ ಸಂಗೀತವನ್ನು ಸುಂದರವಾದ, ರಮ್ಯವಾದ ರೀತಿಯಲ್ಲಿ ಪುನರುಜ್ಜೀವನಗೊಳಿಸಿದನಾದ ಯೋಗಿಗಳಾದ ಮಹಾಪುರುಷರು.

ಯಸ್ಯಸ್ಮೃತಿಃ ಕಲಿಮಲಂ
ಹರತಿ ಪ್ರಜಾನಾಂ
ಸಂದರ್ಶನಂ ಚ ತನುತೇ
ಹರಿಭಕ್ತಿಯೋಗಂ
ನಿಃಶ್ರೇಯಸಾಯ ಜಯತೇ
ಭುವಿಯತ್ಕಟಾಕ್ಷಃ
ತತ್ತ್ಯಾಗರಾಜ ಗುರುರೇವ
ಸದಾ ಗತಿರ್ಮೇ

(ಯಾರ ಸ್ಮರಣೆ ಮಾತ್ರದಿಂದಲೇ ಪ್ರಜೆಗಳಿಗೆ ಕಲಿಮಲದ ನಾಶವಾಗುತ್ತದೆಯೋ; ಯಾರಸಂದರ್ಶನದಿಂದ ಹರಿಭಕ್ತಿಯೋಗ ಹೆಚ್ಚುತ್ತದೆಯೋ, ಯಾರ ಕಟಾಕ್ಷದಿಂದ ಲೋಕದಲ್ಲಿ ಮೋಕ್ಷಸುಖವು ಜಯಪ್ರದವಾಗಿ ಬರುತ್ತದೆಯೋ ಅಂತಹ ತ್ಯಾಗರಾಜಗುರುವೇ ನಮಗೆ ಅವಲಂಬನ) *

# ವಾರ್ತಾಲಹರಿ

## ವೈಭವದ ಶ್ರೀ ಪದ್ಮಾವತೀ ಪರಿಣಯೋತ್ಸವ

ತಿರುಮಲೆಯಲ್ಲಿ ವಾರ್ಷಿಕ ಪದ್ಮಾವತೀ ಪರಿಣ ಯೋತ್ಸವ ಈ ಬಾರಿ ಏಪ್ರಿಲ್ 27, 28, 29, ರಂದು ಮೂರುದಿನಗಳ ಕಾಲ ಭಕ್ತರ ನಯನಾ ನಂದಕರವಾಗಿ, ನಾರಾಯಣಗಿರಿಯ ಉದ್ಯಾನವನ ದಲ್ಲಿ ವೈಭವದಿಂದ ನಡೆಯಿತು.

ಏಪ್ರಿಲ್ 27 ರಂದು ತಿರುಮಲೆಯ ಆಲಯ ದಿಂದ ಶ್ರೀಮಲೆಯಪ್ಪಸ್ವಾಮಿಯನ್ನೂ ಗಜವಾಹ ನದಲ್ಲಿಯೂ ಶ್ರೀದೇವಿ ಭೂದೇವಿಯರನ್ನೂ ಪಲ್ಲ ಕ್ಕಿಯಲ್ಲೂ ಮೆರವಣಿಗೆಯಲ್ಲಿ ಸಕಲ ಸನ್ನಾಹ, ಗೌರವ, ಮರ್ಯಾದೆಗಳೊಂದಿಗೆ ನಾರಾಯಣಗಿ ರಿಯ ಉದ್ಯಾನವನದ ವಿವಾಹ ವೇದಿಕೆಗೆ ಕರೆತರ ಲಾಯಿತು. ಅಲ್ಲಿ ಸಂಪ್ರದಾಯದಂತೆ ಸ್ವಾಮಿಗೆ ಪರಿ ಣಯವನ್ನು ನಡೆಸಲಾಯಿತು. ನಂತರ ಶ್ರೀದೇವಿ ಭೂದೇವಿಯರೊಡನೆ ಸ್ವಾಮಿಯನ್ನು ಉಯ್ಯಾಲೆ ಯಲ್ಲಿ ತೂಗಲಾಯಿತು. ಸಂಕೀರ್ತನ ಸೇವೆಯನ್ನೂ ಮೂರೂದಿನಗಳ ವೈಶಿಷ್ಟ್ಯವೆಂದರೆ ಕೇರಳದ ವಾದ್ಯ ಗೋಷ್ಠಿ ಜನರನ್ನು ವಿಶೇಷವಾಗಿ ಆಕರ್ಷಿಸಿತು. ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶಕುಮಾರ್, ತಿರುಮಲೆಯ ಜೆ.ಇ.ಓ. ಶ್ರೀ ಬಾಲಸುಬ್ರಹ್ಮಣ್ಯಂ ಅವರು ಸೇರಿದಂತೆ ಅಧಿಕಾರಿ ಗಳೂ ಭಕ್ತರೂ ಯಾತ್ರಿಕರೂ ಸೇರಿದ್ದರು.













## ತಿರುಮಲೆಯಲ್ಲಿ ಮುಖ್ಯಮಂತ್ರಿ

ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ಚಂದ್ರಬಾಬು ನಾಯುಡು ಅವರು ಏಪ್ರಿಲ್ ಮೊದಲವಾರದಲ್ಲಿ ತಿರುಮಲೆಗೆ ಆಗಮಿಸಿ ಸ್ವಾಮಿಯ ಸೇವೆ ಮಾಡಿದರು. ಅವರನ್ನು ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ರಮೇಶಕುಮಾರ್ ಮತ್ತಿತರರು ಸ್ವಾಗತಿಸಿದರು. ಅವರಿಗೆ ದರ್ಶನಾನಂತರ ವೇದಾಶೀರ್ವಾದವನ್ನೂ ಪ್ರಸಾದಗಳನ್ನೂ ನೀಡಲಾಯಿತು.



## ಶ್ರೀ ಪಟ್ಟಾಭಿ ರೆಡ್ಡಿ ಪದವಿ ನಿವೃತ್ತಿ

ತಿರುಮಲೆಯಲ್ಲಿ ಶ್ರೀ ವೆಂಕಟೇಶ್ವರ ನಿತ್ಯ ಅನ್ನ ದಾನಯೋಜನೆಯಲ್ಲಿ ವಿಶೇಷದರ್ಜೆಯ ಉಪ ಕಾರ್ಯ ನಿರ್ವಹಣಾಧಿಕಾರಿಯಾಗಿ ಸೇವೆಸಲ್ಲಿಸಿದ ಶ್ರೀ ಪಟ್ಟಾಭಿರೆಡ್ಡಿ ಅವರು ವಯೋಮಾನರೀತ್ಯಾ ಪದವಿಯಿಂದ ನಿವೃತ್ತರಾದರು. ತತ್ಸಂದರ್ಭ ದಲ್ಲಿ ಏಪ್ರಿಲ್ 30 ರಂದು ಸಂಜೆ ತಿರುಪತಿಯ ಅನ್ನಮಾಚಾರ್ಯ ಕಲಾಮಂದಿರದಲ್ಲಿ ಅವರಿಗೆ ಹಾರ್ದಿಕ ಬೀಳ್ಕೊಡುಗೆ ಸಮಾರಂಭವನ್ನು ಏರ್ಪ ಡಿಸಲಾಗಿದ್ದಿತು. ಸಮಾರಂಭದಲ್ಲಿ ಮುಖ್ಯ ಅತಿ ಥಿಯಾಗಿ ಭಾಗವಹಿಸಿದ ಕಾರ್ಯನಿರ್ವಹಣಾಧಿ ಕಾರಿ ಶ್ರೀ ಎಸ್. ರಮೇಶ್‌ಕುಮಾರ್ ಅವರು ಶ್ರೀಯುತರ ಸೇವಾ ಮನೋಭಾವವನ್ನು ಪ್ರಶಂ ಸಿಸಿ, ಹಂತಹಂತವಾಗಿ ಮೇಲೇರಿದ ಶ್ರೀ ಪಟ್ಟಾ ಭಿರೆಡ್ಡಿ ಅವರು ಉದ್ಯೋಗಿಗಳಿಗೆ ಆದರ್ಶವಾಗ ಬೇಕು. ಇಂತಹ ಬೀಳ್ಕೊಡುಗೆಯ ಮೂಲಕ ನಿವೃತ್ತ ರಾಗುವವರಿಗೂ ಒಂದು ಮಧುರ ಸ್ಮೃತಿಯುಳಿಯು ತ್ತದೆ ಎಂದು ನುಡಿದರು. ನಂತರ ಮಾತನಾಡಿದ ತಿ.ತಿ.ದೇ. ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಸತ್ಯನಾರಾಯಣ ರಾವ್ ಅವರು, ತಿ. ತಿ. ದೇವ ಸ್ಥಾನಗಳಲ್ಲಿ ನಿವೃತ್ತಿಯ ದಿನವೇ ಪೆನ್ಷನ್ ಮೊದ ಲಾದವನ್ನು ನೀಡುವುದಾಗಿ ತಿಳಿಸಿದರು. ತಿರುಮ ಲೆಯ ತಿ. ತಿ. ದೇ. ಸಂಯುಕ್ತ ಕಾರ್ಯನಿರ್ವಹಣಾ ಧಿಕಾರಿ ಶ್ರೀ ಬಾಲಸುಬ್ರಹ್ಮಣ್ಯಂ ಅವರು ಮಾತನಾ ಡುತ್ತ ಶ್ರೀ ಪಟ್ಟಾಭಿರೆಡ್ಡಿ ಅವರು ಕರ್ತವ್ಯ ನಿರ್ವಹಣೆ ಯನಂತರ ಸ್ಥಿತಪ್ರಜ್ಞರಂತೆ ನಿವೃತ್ತಿಯನ್ನು ಪಡೆಯು ತ್ತಿರುವುದು ಅವರ ಸಮಚಿತ್ತದ ದ್ಯೋತಕವೆಂದೂ, ಅವರಿಗೆ ಆಯುರಾರೋಗ್ಯ ಶಾಂತಿ ಸಮತೆಗಳನ್ನು ಭಗವಂತ ನೀಡಬೇಕು ಎಂದೂ ಹಾರೈಸಿದರು. ತಿ.ತಿ.ದೇ. ಕ್ಯಾಂಟೀನ್ ಉದ್ಯೋಗಿಗಳು ಏರ್ಪಡಿ ಸಿದ್ದ ಬೀಳ್ಕೊಡುಗೆ ಸಮಾರಂಭದಲ್ಲಿ ಕಾರ್ಮಿಕ ನಾಯಕ ಶ್ರೀ ಸಿ. ರಮಣ ಮಾತನಾಡಿದರು.

ಪದವಿಯನ್ನು ಬಿಟ್ಟುಕೊಟ್ಟ ಶ್ರೀ ಪಟ್ಟಾಭಿಯ ವರು ತಮಗೆ ಅತ್ಯಲ್ಪಕಾಲದಲ್ಲಿ ಆದರವನ್ನೂ ಸಹ ಕಾರವನ್ನೂ ನೀಡಿ ಅನ್ನದಾನಯೋಜನೆಯ ಯಶ ಸ್ಸಿಗೆ ಕಾರಣರಾದ ಸಿಬ್ಬಂದಿ ವರ್ಗವನ್ನು ಕೃತಜ್ಞ ತೆಯಿಂದ ಸ್ಮರಿಸಿ, ನಿರಂತರವಾಗಿ ನಿತ್ಯಾನ್ನದಾನ ಯೋಜನೆ ಯಶಸ್ವಿಯಾಗಲು ಸಿಬ್ಬಂದಿ ವರ್ಗದ ವರು ಶ್ರಮಿಸುವರೆಂಬ ಭರವಸೆ ತಮಗಿದೆಯೆಂದು ನುಡಿದರು.

ಶ್ರೀ ಪಟ್ಟಾಭಿರೆಡ್ಡಿಯವರನ್ನು ಕಾರ್ಯನಿರ್ವಹ ಣಾಧಿಕಾರಿ ಶ್ರೀ ರಮೇಶ್‌ಕುಮಾರ್ ಅವರು ಸನ್ಮಾ ನಿಸಿದರು.

## ಆಲಯ ವಿಜ್ಞಾನ ಕ್ವಿಜ್

ತಿರುಮಲೆ - ತಿರುಪತಿ ದೇವಸ್ಥಾನಗಳ ಉದ್ಯೋಗಿಗಳಿಗೆ ತಿರುಮಲೆ - ತಿರುಪತಿ ಆಲಯಗಳ ಬಗೆಗಿನ ಸಾಮಾನ್ಯಜ್ಞಾನವನ್ನು ಹೆಚ್ಚಿಸುವ ಆಲಯ ವಿಜ್ಞಾನ ಕ್ವಿಜ್ ಕಾರ್ಯಕ್ರಮವನ್ನು ಯಶಸ್ವಿಯಾಗಿ ನಡೆಸಲಾಯಿತು. ತಿ.ತಿ.ದೇ. ಗಳ ವಿವಿಧ ವಿಭಾಗಗಳಲ್ಲಿನ ಉದ್ಯೋಗಿಗಳನ್ನು ವಿಭಾಗ, ವಲಯ, ದೆಟ್ಟ - ತಿರುಪತಿ, ಇತ್ಯಾಗಿ ಹಂತಗಳಲ್ಲಿ ಒಂದೊಂದು ಗುಂಪನ್ನೂ ಶೋಧಿಸುತ್ತ ಅಂತಿಮವಾಗಿ ನಾಲ್ಕು ಸಮೂಹಗಳನ್ನು ಆಯ್ಕೆ ಮಾಡಲಾಯಿತು. ತಿರುಮಲೆಯಿಂದ ಶ್ರೀನಿವಾಸ ಟೀಂ, ತಿರುಪತಿಯಿಂದ ಗೋವಿಂದರಾಜ ಟೀಂ, ಪದ್ಮಾವತೀ ಟೀಂ, ವರದರಾಜ ಟೀಂಗಳು (ಟೀಮಿಗೆ ನಾಲ್ವರು ಸದಸ್ಯರಂತೆ) ಅಂತಿಮ ಕ್ವಿಜ್‌ಗೆ ಅರ್ಹತೆ ಪಡೆದವು. 96ನೇ ಏಪ್ರಿಲ್ 24 ರಂದು ತಿರುಪತಿಯ ಅನ್ನಮಾಚಾರ್ಯ ಕಲಾಮಂದಿರದಲ್ಲಿ ತಿ.ತಿ. ದೇ. ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಸತ್ಯನಾರಾಯಣ ರಾವ್ ಐ. ಎ. ಎಸ್. ಅವರು ಅಧ್ವರ್ಯುವಾಗಿ ಕ್ವಿಜ್ ಕಾರ್ಯಕ್ರಮವನ್ನು ರಸವತ್ತರವಾಗಿ ನಡೆಸಿಕೊಟ್ಟರು. ಆರು ಆವರ್ತನೆಗಳನ್ನು ಹೊಂದಿದ ಕಾರ್ಯಕ್ರಮದಲ್ಲಿ ಮೊದಲ ಆವರ್ತನದಲ್ಲಿ ತಿರುಮಲೆಯ ಆಲಯದ ಉತ್ಸವಗಳು, ಅರ್ಚನೆಗಳು ಎರಡನೆಯ ಆವರ್ತನದಲ್ಲಿ ತಿರುಮಲೆಯ ಆಲಯದ ಚರಿತ್ರೆ, ಮೂರನೆಯ ಆವರ್ತನದಲ್ಲಿ ತಿರುಪತಿಯ ಆಲಯಗಳು, ನಾಲ್ಕನೆಯ ಆವರ್ತನದಲ್ಲಿ ತಿ.ತಿ.ದೇ. ಪರಿಪಾಲನಾ ಸಂವಿಧಾನ, ಐದನೆಯ ಆವರ್ತನದಲ್ಲಿ ಅನ್ನಮಾಚಾರ್ಯ ಕೃತಿಗಳ ಶ್ರವಣ (ಆಡಿಯೊ ರೌಂಡ್) ಆರನೆಯ ಆವರ್ತನದಲ್ಲಿ ವೀಕ್ಷಣ (ವೀಡಿಯೋ ರೌಂಡ್) ಗಳ ಬಗ್ಗೆ ಪ್ರಶ್ನೆಗಳಿದ್ದವು. ಸ್ಪರ್ಧೆಯಲ್ಲಿ ಶ್ರೀ ಗೋವಿಂದರಾಜ ಟೀಂ ಮೊದಲಸ್ಥಾನವನ್ನು ಶ್ರೀನಿವಾಸ ಟೀಂ ಎರಡನೆಯ ಹಾಗೂ ಪದ್ಮಾವತೀ ಟೀಂ ಮೂರನೆಯ ಸ್ಥಾನವನ್ನೂ ಪಡೆದವು. ಕಾರ್ಯಕ್ರಮದಲ್ಲಿ ವಿಶೇಷ ದರ್ಜೆಯ ಡೆ.ಇ.ಓ. ಶ್ರೀ ಟಿ. ಕೃಷ್ಣಸ್ವಾಮಿ, ಡೆ.ಇ.ಓ. ಶ್ರೀ ಗುರವಯ್ಯ, ಪ್ರಧಾನ ಆರ್ಥಿಕ ಸಲಹೆಗಾರ ಶ್ರೀ ಕುಪ್ಪುಸ್ವಾಮಿ, ತಿ.ತಿ.ದೇ. ಆಸ್ಥಾನವಿದ್ವಾಂಸರು ಶ್ರೀ ಮಾಡಬಾಕಂ ಶ್ರೀನಿವಾಸಾಚಾರ್ಯ ಮೊದಲಾದ ಅನೇಕರು ಪಾಲುಗೊಂಡರು.

## ವೈಭವದ ವಸಂತೋತ್ಸವ

ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ಆಲಯದಲ್ಲಿ ವಾರ್ಷಿಕ ವಸಂತೋತ್ಸವಗಳು 31-3-96 ರಿಂದ ಮೂರುದಿನಗಳ ಕಾಲ ಯಶಸ್ವಿಯಾಗಿ ನಡೆದವು. ಚೈತ್ರಮಾಸದ ಪೌರ್ಣಿಮೆಯ ಆಚೀಚಿನ ದಿನಗಳಲ್ಲಿ ನಡೆದ ಈ ವಸಂತೋತ್ಸವದಲ್ಲಿ ಮೊದಲ ದಿನ ಶ್ರೀ ವೆಂಕಟೇಶ್ವರಸ್ವಾಮಿ ವಸಂತೋತ್ಸವ ನಡೆದರೆ, ಎರಡನೆಯ ದಿನ ಏಪ್ರಿಲ್ ಒಂದರಂದು ಸ್ವಾಮಿ ಚಿನ್ನದ ರಥದಲ್ಲಿ ವಸಂತೋತ್ಸವ ಮಂಟಪಕ್ಕೆ ಆಗಮಿಸಿದರು. ಮೂರನೆಯದಿನ ವಸಂತೋತ್ಸವಕ್ಕೆ ಸ್ವಾಮಿಯನ್ನೇ ಅಲ್ಲದೆ ಶ್ರೀ ಕೋದಂಡರಾಮರನ್ನೂ ಶ್ರೀಕೃಷ್ಣಸ್ವಾಮಿಯನ್ನು ಮೆರವಣಿಗೆಯಲ್ಲಿ ಕರೆತರಲಾಗಿದ್ದು ಹಲವಾರು ಭಕ್ತಯಾತ್ರಿಕರು ಈ ವಸಂತೋತ್ಸವದಲ್ಲಿ ಭಾಗವಹಿಸಿದ್ದರು.





## ಅಂತ್ಯಾಕ್ಷರಿ ಕೀರ್ತನೆ

96ನೇ ಏಪ್ರಿಲ್ 24 ರಂದು ಬುಧವಾರ ಅನ್ನಮಾಚಾರ್ಯ ಕಲಾಮಂದಿರದಲ್ಲಿ ಕೀರ್ತನೆಗಳಲ್ಲಿ





## ಪ್ರೆಸ್ ಮ್ಯಾನೇಜರ್ ನಿಧನ

ತಿ. ತಿ. ದೇವಸ್ಥಾನಗಳ ಮುದ್ರಣಾಲಯದ ಮ್ಯಾನೇಜರ್ ಆಗಿದ್ದ ಎಂ. ವಿಜಯಕುಮಾರರೆಡ್ಡಿ ಅವರು ಏಪ್ರಿಲ್ 17 ರಂದು ಹೈದರಾಬಾದಿನ ಅಪೋಲೋ ಆಸ್ಪತ್ರೆಯಲ್ಲಿ ದೀರ್ಘಕಾಲದ ಅನಾರೋಗ್ಯದಿಂದ ವೈಕುಂಠ ವಾಸಿಗಳಾದರೆಂದು ತಿಳಿಸಲು ವಿಷಾದವಾಗುತ್ತದೆ.

ಶ್ರೀಯುತರು 1967 ರಲ್ಲಿ ತಿ.ತಿ.ದೇ. ಮುದ್ರಣಾಲಯದಲ್ಲಿ ಉದ್ಯೋಗಕ್ಕೆ ಸೇರಿ, ಮ್ಯಾನೇಜರ್ ಆಗಿ ಪದೋನ್ನತಿಯನ್ನು ಪಡೆದು, 1993 ರಿಂದ ದೀರ್ಘಕಾಲಿಕ ರಜೆಯ ಮೇಲೆ ಕಲ್ಕಿ ಭಗವಾನರ ಭಕ್ತಿಯಲ್ಲಿ ದೇಶಾಟನೆ ಮಾಡುತ್ತ ಹೃದಯರೋಗ ಪೀಡಿತರಾಗಿ ಅಪೋಲೋ ಆಸ್ಪತ್ರೆಯನ್ನು ಸೇರಿ ಅಲ್ಲಿಯೇ ತೀರಿಕೊಂಡರು.

ಮೃತರನ್ನು ತಿರುಪತಿಯ ಸಮೀಪದ ಸ್ವಗ್ರಾಮ ತೊಂಡವಾಡಕ್ಕೆ ತಂದು ಅಲ್ಲಿಯೇ ಅಂತ್ಯಕ್ರಿಯೆಗಳನ್ನು ನಡೆಸಲಾಯಿತು. ಮೃತರ ಆತ್ಮಕ್ಕೆ ಶಾಂತಿಯನ್ನು ನೀಡಲೆಂದು ಶ್ರೀ ವೆಂಕಟೇಶ್ವರಸ್ವಾಮಿಯಲ್ಲಿ ಸಪ್ತಗಿರಿ ಬೇಡುತ್ತದೆ.

ಸಂ||

ಅಂತ್ಯಾಕ್ಷರಿ ಕಾರ್ಯಕ್ರಮ ಏರ್ಪಟ್ಟಿದ್ದು, ಶ್ರೀ ತಿ.ತಿ.ದೇ. ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಸತ್ಯನಾರಾಯಣರಾವ್ ಅವರ ಪರ್ಯವೇಕ್ಷಣದಲ್ಲಿ ಶ್ರೀ ಜಿ. ಬಾಲಕೃಷ್ಣಪ್ರಸಾದ್ ಅಂತ್ಯಾಕ್ಷರಿ ಕಾರ್ಯಕ್ರಮವನ್ನು ನಿರ್ವಹಿಸಿದರು. ಅನ್ನಮಾಚಾರ್ಯ, ತ್ಯಾಗರಾಜರು, ಶ್ಯಾಮಾಶಾಸ್ತ್ರಿ, ಮುತ್ತುಸ್ವಾಮಿ ದೀಕ್ಷಿತರ್, ರಾಮದಾಸು, ಮೊದಲಾದವರ ಕೀರ್ತನೆಗಳನ್ನು ಬಳಸಿ ಅಂತ್ಯಾಕ್ಷರಿಯಲ್ಲಿ ಗೆಲ್ಲಲು ಶ್ರೀನಿವಾಸ ಟೀಂ, ಹಾಗೂ ಪದ್ಮಾವತೀ ಟೀಂಗಳು, ಹೃದಯಂಗಮವಾಗಿ ಸ್ಪರ್ಧಿಸಿದವು. ಶ್ರೀನಿವಾಸ ಟೀಂ, ಮೊದಲ ಸ್ಥಾನ ಪಡೆದು ಮನ್ನಣೆಗಳಿಸಿತು. ಅಂತ್ಯಾಕ್ಷರಿಯಲ್ಲಿ ಭಾಗವಹಿಸಿದ ಟೀಂಗಳನ್ನು ಸ್ಟೇಟ್ ಬ್ಯಾಂಕ್‌ನವರು ಬಹುಮಾನ ನೀಡಿ ಸತ್ಕರಿಸಿದರು.

## ಕನ್ನಡದಲ್ಲಿ ಅಷ್ಟಾವಧಾನ

ಕೋಲಾರದ ಸಂಸ್ಕೃತ ಸಂಘದ ಆಶ್ರಯದಲ್ಲಿ ಇದೇ ಮಾರ್ಚ್ ಇಪ್ಪತ್ನಾಲ್ಕರಂದು ಕೋಲಾರದ ಗಾಯತ್ರೀ ಪ್ರಾರ್ಥನಾ ಮಂದಿರದಲ್ಲಿ ಅವಧಾನಿ ಶ್ರೀ ಆರ್. ಗಣೇಶ್ ಅವರಿಂದ ಕನ್ನಡ ಅಷ್ಟಾವಧಾನ ಕಾರ್ಯಕ್ರಮ ನಡೆಯಿತು. ಭಾರತೀಯ ವಿದ್ಯಾಭವನದ ಬಹುಭಾಷಾವಿದ್ವಾಂಸ ಶ್ರೀ ಗಣೇಶ್ ಅವರ 200 ನೇ ಕನ್ನಡ ಅವಧಾನಕಾರ್ಯಕ್ರಮ ಇದಾಗಿದ್ದು ಕೋಲಾರದಲ್ಲಿಯೇ ಅವರು ತಮ್ಮ ಮೊದಲನೆಯ ನೂರನೆಯ ಅಷ್ಟಾವಧಾನ ಕಾರ್ಯಕ್ರಮಗಳನ್ನು ನಡೆಸಿದ್ದರು.

ಈ ಅಷ್ಟಾವಧಾನ ಕಾರ್ಯಕ್ರಮದಲ್ಲಿ ಸರ್ವಶ್ರೀ ಡಾ|| ಎಸ್. ರಂಗನಾಥ್ (ನಿಷೇಧಾಕ್ಷರಿ) ಟಿ. ಎನ್. ಪದ್ಮನಾಭನ್ (ದತ್ತಪದಿ) ಬಿ. ಆರ್. ಪ್ರಭಾಕರ್ (ನಿರ್ಧಿಷ್ಟಾಕ್ಷರಿ) ಪಿ. ಶಶಿಧರ್ (ಕಾವ್ಯವಾಚನ) ಶಂಕರ್ (ಆಶುಕವಿತ್ವ) ಟಿ. ಎನ್. ಪ್ರಭಾಕರ್ (ಅಪ್ರಸ್ತುತ ಪ್ರಸಂಗ) ಎನ್. ಎಲ್. ಶ್ರೀನಿವಾಸಮೂರ್ತಿ (ಸಂಖ್ಯಾಬಂಧ) ಅವರುಗಳು ಪೃಚ್ಛಕರಾಗಿದ್ದರು. ಡಾ|| ಅನಂತ ಪದ್ಮನಾಭರಾವ್ ಅವರು ಅಧ್ಯಕ್ಷತೆ ವಹಿಸಿ ಮಾತನಾಡುತ್ತ ಕನ್ನಡದಲ್ಲಿ ವಿರಳವಾಗಿದ್ದ ಅಷ್ಟಾವಧಾನವನ್ನು ಪ್ರಚಾರಕ್ಕೆ ಪ್ರಸಿದ್ಧಿಗೆ ತರುತ್ತಿರುವ ಅವಧಾನಿಗಳ ಸಂತತಿ ಸಾವಿರವಾಗಲಿ ಎಂದು ಹಾರೈಸಿದರು. ಪ್ರಮೋದದ ಜೊಡನೆಯೇ ಪ್ರಬೋಧವನ್ನೂ ಉಂಟುಮಾಡುತ್ತ, ಸಭಿಕರ ಬೌದ್ಧಿಕತೆಯನ್ನು ಬೆಳೆಸುವ ಅವಧಾನ ಪ್ರಕ್ರಿಯೆ ಹತ್ತು ಹೂವು ನೂರು ಹಣ್ಣಾಗಿ ಬೆಳೆಯಲಿ ಎಂದು ಸ್ವಾರಸ್ಯವಾದ ಉದಾಹರಣೆಗಳಿಂದ ಹರಸಿದರು.

ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಸಹಕಾರ ನೀಡಿದ ಕಾರ್ಯಕ್ರಮದಲ್ಲಿ ಶ್ರೀಮತಿ ಸರೋಜ ಕೃಷ್ಣಮೂರ್ತಿ ಅವರು ಅವಧಾನಿಗಳ, ಪೃಚ್ಛಕರ, ಅವಧಾನದ ಪರಿಚಯ ಮಾಡಿಕೊಟ್ಟರು ಹಾಗೂ ಸಭೆಯನ್ನು ವಂದಿಸಿದರು.




## ಶಂಕರ ಜಯಂತಿ ಉತ್ಸವಗಳು

ಕೋಲಾರದ ಶಂಕರ ಮಠದಲ್ಲಿ ಸ್ಥಳೀಯ ಶಂಕರ ಸೇವಾ ಸಂಘದವರು 22-4-96 ರಿಂದ 30-4-96 ರವರೆಗೆ ಶಂಕರಜಯಂತಿ ಉತ್ಸವಗಳನ್ನು ಘನವಾಗಿ ಆಚರಿಸಿದರು.

22 ರಂದು ಬೆಳಗ್ಗೆ ಆರಂಭವಾದ ಜಯಂತಿ ಉತ್ಸವಗಳಲ್ಲಿ ಪ್ರತಿದಿನವೂ ನವಗ್ರಹಜಪ ವೇದ ಪಾರಾಯಣ, ಆಚಾರ್ಯರಿಗೆ ಹಾಗೂ ಶಾರದಾಂಬೆಯವರಿಗೆ ಅಭಿಷೇಕಗಳು ನಡೆದವು. ಮೊದಲ ದಿನ ಶಂಕರ ಭಗವತ್ಪಾದರ ಮೆರವಣಿಗೆ ನಗರದ ಬೀದಿಗಳಲ್ಲಿ ನಡೆಯಿತು. ಅಂದು ಮಹಾಮಂಗಳಾರತಿಯ ನಂತರ ಅನ್ನಸಂತರ್ಪಣೆಯೂ ನಡೆಯಿತು. ಕಡೆಯ ದಿನವೂ ಅನ್ನಸಂತರ್ಪಣೆ ನಡೆದು ಮಧ್ಯದ ದಿನಗಳಲ್ಲಿ ಪ್ರಸಾದ ವಿನಿಯೋಗ ಜರುಗಿತು.

ದಿನವೂ ಸಂಜೆ ಸಾಂಸ್ಕೃತಿಕ ಕಾರ್ಯಕ್ರಮಗಳಿದ್ದು ಶ್ರೀಮತಿ ವನಿತಾಮಣಿ ಶ್ರೀಮತಿ ಗಿರಿಜಮ್ಮ ಅವರುಗಳ ಸಂಗೀತ ಕಚೇರಿಗಳು ನಡೆದವು. ಎನ್. ಆರ್. ಜ್ಞಾನಮೂರ್ತಿ ಅವರು ಗಿರಿಜಾ ಕಲ್ಯಾಣ ಹರಿಕಥೆಯನ್ನು ಕಡೆಯ ದಿನ ನಡೆಸಿಕೊಟ್ಟರು. ಮಿಕ್ಕದಿನಗಳಲ್ಲಿ ಶಂಕರ ಜೀವನದ ವಿವಿಧ ಹಂತಗಳ ಬಗ್ಗೆ

ಕೃತಿಗಳ ಬಗ್ಗೆ, ಖ್ಯಾತ ಉಪನ್ಯಾಸಕರು ಪ್ರಬೋಧ ನೀಡಿದರು. ಸರ್ವಶ್ರೀ ತರ್ಕಂ ಕೃಷ್ಣಶಾಸ್ತ್ರಿ (ಭಾಸ್ಕರ ರಚನೆ) ಡಿ.ಕೆ. ಸುಬ್ರಹ್ಮಣ್ಯಂ (ಬ್ರಹ್ಮವಿದ್ಯಾವಿಚಾರ) ವಿ. ಆರ್. ರಮೇಶ್ (ದಿಗ್ವಿಜಯ,) ಕೆ. ವೆಂಕಟೇಶನ್ (ಪ್ರಶ್ನೋತ್ತರ ರತ್ನ ಮಾಲಿಕಾ) ಗಣೇಶಭಟ್ಟ (ಭಗವತ್ಪಾದರ ಸಂದೇಶ) ವ್ಯಾಸಶಾಸ್ತ್ರಿ (ಅದ್ವೈತದ ಪ್ರಸ್ತುತತೆ) ಕುಮಾರಿ ಎಸ್. ಉಮಾದೇವಿ (ದಕ್ಷಿಣಾಮೂರ್ತಿ ಸ್ತೋತ್ರ) ಜನರನ್ನು ಆಕರ್ಷಿಸಿದವು.

ಶಂಕರ ಸೇವಾಸಮಿತಿಯ ಶ್ರೀ ಕೆ. ಸತ್ಯನಾರಾಯಣಶಾಸ್ತ್ರಿ, ಶ್ರೀ ಕೆ. ಎಸ್. ರಾಮಶೇಷಯ್ಯ ಶ್ರೀ ಎನ್. ಕಿಟ್ಟಪ್ಪನವರೂ ಕಾರ್ಯಕಾರಿ ಸಮಿತಿಯ ಸದಸ್ಯರೂ ಹಲವಾರು ಪ್ರಮುಖ ನಾಗರಿಕರೂ ಜಯಂತಿ ಉತ್ಸವದ ಯಶಸ್ವಿ ನಿರ್ವಹಣೆಗೆ ಕಾರಣರಾದರು.



## ಶ್ರೀ ಕಪಿಲೇಶ್ವರಸ್ವಾಮಿ ದೇವಾಲಯ

**ಕಪಿಲತೀರ್ಥ, ತಿರುಪತಿ.**

**ತಿರುಪತಿಯ ಕಪಿಲತೀರ್ಥದಲ್ಲಿರುವ**

**ಶ್ರೀ ಕಪಿಲೇಶ್ವರಸ್ವಾಮಿ**

**ದೇವಾಲಯದಲ್ಲಿ ಆಸ್ತಿಕ**

**ಭಕ್ತ ಪ್ರಯೋಜನಕ್ಕಾಗಿ--**

**ನಿತ್ಯಾಭಿಷೇಕ ಸೇವೆ**

--ಏರ್ಪಡಿಸಲಾಗಿದೆ. ವರ್ಷಕ್ಕೆ ೪೨ ರೂಪಾಯಿ ಶುಲ್ಕ ಅಥವಾ ಒಂದೇ ಬಾರಿಗೆ ೫೦೦ ರೂಗಳ ಇಡುಗಂಟು ಹಾಗೂ ೪೨ ರೂಗಳ ಆರಂಭವರ್ಷದ ಶುಲ್ಕವನ್ನು ನೀಡುವುದರ ಮೂಲಕ ಈ ಸೇವೆಯನ್ನು ನಡೆಸಬಹುದಾಗಿದೆ. ವರ್ಷದಲ್ಲಿ ಎರಡು ಬಾರಿ ಇಬ್ಬರು ವಯಸ್ಕರನ್ನು ಈ ಸೇವೆಯ ಸಂದರ್ಶನಕ್ಕೆ ಅನುಮತಿಸಲಾಗುವುದು.

ಭಕ್ತರು ಈ ಸೌಲಭ್ಯವನ್ನು ಬಳಸಿಕೊಳ್ಳಬೇಕೆಂದು ಕೋರಲಾಗಿದೆ.

**ತಿ. ತಿ. ದೇ.**



## ತಿರುಮಲೆಯಲ್ಲಿ ಪ್ರಧಾನಮಂತ್ರಿ

96 ರ ಏಪ್ರಿಲ್ ಮೊದಲ ವಾರದಲ್ಲಿ ತಿರುಮಲೆಗೆ ಭಾರತದ ಪ್ರಧಾನಮಂತ್ರಿ ಶ್ರೀ ಪಿ. ವಿ. ನರಸಿಂಹರಾಯರು ಆಗಮಿಸಿ ಸ್ವಾಮಿ ಸೇವೆಯಲ್ಲಿ ಪಾಲುಗೊಂಡರು.

ಪ್ರಧಾನಮಂತ್ರಿಗಳನ್ನು ಆಲಯ ಸಂಪ್ರದಾಯ ರೀತ್ಯಾ ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶಕುಮಾರ್ ಅವರು ಮತ್ತಿತರರೊಡನೆ ಸ್ವಾಗತಿಸಿದರು. ಪ್ರಧಾನಮಂತ್ರಿಗಳಿಗೆ ದರ್ಶನಾನಂತರ ವೇದಾಶೀರ್ವಾದವನ್ನು ಪ್ರಸಾದಗಳನ್ನು ನೀಡಲಾಯಿತು.





ಕೊಳ್ಳಿರಿ ಕೊಂಡು ಓದಿರಿ

# ಮುಂದಿನ ಸಂಚಿಕೆಯಲ್ಲಿ

ಸಪ್ತಗಿರಿ

ಜೂನ್ 1996

1996 ರ ಜೂನ್ ತಿಂಗಳಿನಲ್ಲಿ ಸಪ್ತಗಿರಿ ಇಪ್ಪತ್ತಾರು ವರ್ಷಗಳನ್ನು ಪೂರ್ತಿಗೊಳಿಸಿ 27ನೇ ವರ್ಷದಲ್ಲಿ ಕಾಲಿಡುತ್ತದೆ. ಈ ಸಂಚಿಕೆಯ ಹಲವು ಮುಖ್ಯ ಲೇಖನಗಳು ಈ ರೀತಿ ಇವೆ.

**ಕ್ರೋಧಭಟ್ಟಾರಕ ದುರ್ವಾಸ :**

ದುರ್ವಾಸರು ನಾಣ್ನುಡಿಯಾಗುವಷ್ಟು ಪ್ರಸಿದ್ಧರು. ಅಷ್ಟು ಕೋಪದಿಂದಲೂ ಜಗತ್ತಿಗೆ ಒಳಿತಿನ ಹಾದಿಯನ್ನು ತೋರಿಸುವಲ್ಲಿ ಸಫಲರಾದರು. ಅವರ ಜೀವನವನ್ನು ಸುಂದರವಾಗಿ ಚಿತ್ರಿಸಿದ್ದಾರೆ ಶಿವಮೊಗ್ಗದ ವಿದ್ವಾಂಸ ಕೆ. ಜಗನ್ನಾಥಶಾಸ್ತ್ರೀ.

**ದೇವರ ಪರಿಕಲ್ಪನೆ :**

ಎಲ್ಲ ಜನಾಂಗದಲ್ಲೂ ದೇವರು ಇದ್ದಾನೆ. ಆದರೆ ಅವನನ್ನು ವಿಭಿನ್ನವಾಗಿ ಎಲ್ಲರೂ ಗುರುತಿಸಿದರು ಅವರವರ ಭಾವಕ್ಕೆ ತಕ್ಕಂತೆ. ದಾಸರು - ಕನ್ನಡದ ಹರಿದಾಸರು ಕಂಡ ದೇವರ ಬಗ್ಗೆ ದಾಸ ಸಾಹಿತ್ಯಾಧಾರದಲ್ಲಿ ವಿವರಿಸಿದ್ದಾರೆ ಬೆಂಗಳೂರಿನ ಪ್ರೊ|| ಬಸವರಾಜ ಪುರಾಣಿಕ.

**ಕನಕದಾಸರ ಕೀರ್ತನೆಗಳು :**

ಕನ್ನಡ ಹರಿದಾಸರಲ್ಲಿ ಕನಕದಾಸರು ವಿಶಿಷ್ಟರಾದವರು. ಹರಿಯನ್ನು ಹತ್ತಿರದಿಂದ ಕಂಡು ಹಾಡಿ ಕುಣಿದವರು. ಅವರ ಕೀರ್ತನೆಗಳ ವೈಶಿಷ್ಟ್ಯವನ್ನು ವೈವಿಧ್ಯವನ್ನು ವಿವರಿಸಿದ್ದಾರೆ - ಗುಲ್ಬರ್ಗದ ಪ್ರೊ|| ವಸಂತಕುಷ್ಟಗಿ.

**ರಮಣಮಹರ್ಷಿ :**

ಭಾರತದಲ್ಲಿ ಆಗಿಹೋದ ಸಂತರಲ್ಲಿ ಹಲವರು ಪ್ರಾಚೀನರು ಹಲವರು ಅರ್ವಾಚೀನರು. ಅರ್ವಾಚೀನರಲ್ಲಿ ಈಚಿನವರೆಗೆ ಇದ್ದ ರಮಣಾಶ್ರಮದ ರಮಣಮಹರ್ಷಿಗಳು ಒಂದು ದೊಡ್ಡ ಶಕ್ತಿ, ಹೆಸರು. ಆ ಬಗ್ಗೆ ವಿವರಿಸುತ್ತಾರೆ - ಬಂಗಾರಪೇಟೆಯ ಡಿ. ರಾಮಕೃಷ್ಣರಾವ್.

ಜೊತೆಗೇ ಮತ್ತೂ ಹಲವಾರು ಸಾಮಯಿಕ ಲೇಖನಗಳು ಸೇರಿ ಪ್ರಕಟವಾಗುವ ಸಪ್ತಗಿರಿಯನ್ನು ಬರಮಾಡಿಕೊಳ್ಳಿ ತಮ್ಮ ಮನೆಗೆ - ಮನಕ್ಕೆ.

ಸಪ್ತಗಿರಿಯ ವಾರ್ಷಿಕ ಚಂದಾ ರೂ. 48/- ಮಾತ್ರ. ಎಂ.ಓ. / ಡಿ.ಡಿ. ಗಳನ್ನು ಕಳುಹಿಸಬೇಕಾದ ವಿಳಾಸ - ಸಂಪಾದಕರು ಸಪ್ತಗಿರಿ, ತಿ.ತಿ.ದೇ. ತಿರುಪತಿ - 517 507

ಓದಿರಿ ಓದಿಸಿರಿ



# ತಿಂಗಳಿನ ಮುಖ್ಯದಿನಗಳು

ಜೂನ್ --- 1996

1 ಶನಿವಾರ :
ತಿರುಪತಿ ಶ್ರೀ ಗೋವಿಂದರಾಜಸ್ವಾಮಿ
ಬ್ರಹ್ಮೋತ್ಸವ ಸಮಾಪ್ತಿ.
ತಿರುಚಾನೂರು
ಶ್ರೀ ಪದ್ಮಾವತೀದೇವಿ
ತೆಪ್ಪೋತ್ಸವ ಸಮಾಪ್ತಿ.

2 ಭಾನುವಾರ :
ತಿರುಮಲೆಯಲ್ಲಿ
ಜ್ಯೇಷ್ಠಾಭಿಷೇಕ ಸಮಾಪ್ತಿ.

3 ಸೋಮವಾರ :
ಕೈವಾರದ
ಶ್ರೀಯೋಗಿ ನಾರಾಯಣ ಆರಾಧನೆ.

4 ಮಂಗಳವಾರ :
ಕಂಚಿಯಲ್ಲಿ
ಶ್ರೀ ವರದರಾಜಸ್ವಾಮಿ
ರಥೋತ್ಸವ.

17 ಸೋಮವಾರ :
ಶ್ರೀ ಪೆರಿಯಾಳ್ವಾರ್
ಉತ್ಸವಾರಂಭ.

26 ಬುಧವಾರ :
ಶ್ರೀ ಪೆರಿಯಾಳ್ವಾರ್.
ಶಾತ್ತುಮೊರೆ.

28 ಶುಕ್ರವಾರ :
ನಾಥಮುನಿಗಳ
ವರ್ಷ ತಿರುನಕ್ಷತ್ರ.

Published on behalf of T. T. Devasthanams by N. S. Ramamurthy, M.A., Editor and
Printed at T.T.D. Press by P. Mohan Rao, Manager, T.T.D. Press, Tirupati - 517 507

